**ಸಂಸ್ಕೃತಭಾರತೀ**
'ಅಕ್ಷರಂ', ೮ ಉಪಮಾರ್ಗಃ, ೨ಘಟ್ಟಃ,
ಗಿರಿನಗರಂ, ಬೆಂಗಳೂರು - ೫೬೦ ೦೮೫
ದೂರವಾಣಿ - ೬೭೨೧೦೫೨ / ೬೭೨೨೫೭೬



ಪ್ರಥಮಮುದ್ರಣಮ್ ೮೩, ೫,೦೦೦
ದ್ವಿತೀಯಮುದ್ರಣಮ್ ೮೪, ೫,೦೦೦
ತೃತೀಯಮುದ್ರಣಮ್ ೮೪, ೧೦,೦೦೦
ಚತುರ್ಥಮುದ್ರಣಮ್ ೮೬, ೫,೦೦೦
ಪಂಚಮಮುದ್ರಣಮ್ ೮೮, ೧೦,೦೦೦
ಷಷ್ಠಮುದ್ರಣಮ್ ೯೦, ೧೦,೦೦೦
ಸಪ್ತಮಮುದ್ರಣಮ್ ೯೪, ೧೦,೦೦೦
ಅಷ್ಟಮಮುದ್ರಣಮ್ ೯೯, ೧೦,೦೦೦

**ಮೂಲ್ಯಮ್ - ರೂ. ೧೫.೦೦**
ಕಲಾ - **ಶ್ರೀ ಕೆ.ಜಿ. ಲಿಂಗದೇವರು**
ಮುದ್ರಣಮ್ - **ಸ್ಪ್ಯಾನ್ ಪ್ರಿಂಟ್,**
ಬಸವನಗುಡಿ, ಬೆಂಗಳೂರು - ೪

**SAMSKRITA VYAVAHĀRA SĀHASRĪ** (Kannada Script) - A Collection of thousand familiar sentences with Kannada meaning.
Publishers - SAMSKRITA BHARATI, 'Aksharam', 8th Cross, 2nd Phase, Girinagar, Bangalore - 560 085
Pages - iv + 66 Price : Rs. 15.00. Eight Print : Feb. 1999
Printed at : **Span Print,** Basavanagudi, Bangalore - 560 004

# ಪೂರ್ವಪೀಠಿಕಾ

## (ಪ್ರಥಮಮುದ್ರಣಮ್)

ಸಂಸ್ಕೃತವನ್ನು ಅಲ್ಪಸ್ವಲ್ಪ ಅರಿತಿದ್ದು, ಮಾತನಾಡಬಯಸುವವರು ಹಲವರು. ಸಮಯಕ್ಕೆ ಸರಿಯಾಗಿ ಶಬ್ದಗಳು ಹೊಳೆಯಲೊಲ್ಲವು. ಭಾವನೆಯ ವೇಗಕ್ಕೆ ತಕ್ಕಂತೆ ವಾಕ್ಯಗಳು ಬರಲೊಲ್ಲವು. ಶಬ್ದಗಳ ಜೋಡಣೆಗಾಗಿ ಕಸರತ್ತು ಮಾಡಬೇಕಾಗುತ್ತದೆ. ಇದರ ಬದಲು ಸಂದರ್ಭಕ್ಕನುಗುಣವಾದ ಸಿದ್ಧವಾಕ್ಯಗಳೇ ದೊರೆತರೆ ? ತುಂಬ ಅನುಕೂಲ ತಾನೇ ? ಅದಕ್ಕಾಗಿಯೇ ಈ ಪುಸ್ತಕ 'ಸಂಸ್ಕೃತ ವ್ಯವಹಾರ ಸಾಹಸ್ರೀ'.

ಬಾಲೋಪಯೋಗಿಯಾದ ನೂರಾರು ವಾಕ್ಯಗಳ ಸಂಗ್ರಹವನ್ನು ನೋಡಿದ ಹಲವರು ಕೇಳುತ್ತಿದ್ದರು - 'ಎಲ್ಲ ವಿಧದ ಜನರಿಗೂ ಉಪಯೋಗಿಯಾದ ಪುಸ್ತಕವೊಂದು ಇಲ್ಲವೇ ?' ಎಂದು. ಆದುದರಿಂದ ಈ ಕೆಲಸವನ್ನು ಕೈಗೆತ್ತಿಕೊಂಡೆವು. ಹಲವಾರು ವಿದ್ವಾಂಸರ ಸಹಾಯ ಕೋರಿದೆವು. ಎಲ್ಲರೂ ತುಂಬ ಉತ್ಸಾಹದಿಂದ ಸಹಕರಿಸಿದರು. ಬಹುಜನರ ಸಹಕಾರ, ಶ್ರಮದಿಂದ ಈ ಹೊತ್ತಿಗೆ ರೂಪುಗೊಂಡಿದೆ.

ಮುದ್ರಣಕಾರ್ಯಕ್ಕೆ ಆರ್ಥಿಕ ಬೆನ್ನೆಲುಬಾಗಿ ಶ್ರೀ ಧರ್ಮಸ್ಥಳ ವೀರೇಂದ್ರಹೆಗ್ಗಡೆಯವರು ಸಹಕರಿಸಿದ್ದಾರೆ. ಅವರಿಗೆ ನಮ್ಮ ಹಾರ್ದಿಕ ಕೃತಜ್ಞತೆಗಳು.

ಈ ಪುಸ್ತಕದ ವಾಕ್ಯಗಳು ಬುದ್ಧಿಬಲದಿಂದ ಬಂದವುಗಳು. ಪ್ರಯೋಗಾನುಭವವು ಇಲ್ಲಿ ಪರಿಷ್ಕಾರವನ್ನು ಬಯಸೀತು. ಪರಿಷ್ಕಾರದ ದಿಸೆಯಲ್ಲಿ ಎಲ್ಲರ ಸಲಹೆ ಸೂಚನೆಗಳಿಗೂ ಸ್ವಾಗತವಿದೆ.

- **ಪ್ರಕಾಶಕಃ**

## (ಅಷ್ಟಮಮುದ್ರಣಮ್)

ಸಂಸ್ಕೃತ ವ್ಯವಹಾರ ಸಾಹಸ್ರಿಯ ಮೊದಲ ಮುದ್ರಣ ೧೯೮೩ರಲ್ಲಿ ಹೊರಬಂತು. ಅಲ್ಲಿಂದ ಈಚಿನ ವರ್ಷಗಳಲ್ಲಿ ಏಳು ಮುದ್ರಣಗಳನ್ನು ಕಂಡ ಈ ಕಿರುಹೊತ್ತಿಗೆಯ ಎಂಟನೆಯ ಮುದ್ರಣ ಇದೀಗ ಸಿದ್ಧವಾಗಿದೆ. ಮೊದಲಬಾರಿಗೆ ಕನ್ನಡ ಅನುವಾದದೊಂದಿಗೆ ಪ್ರಕಟವಾದ ಇದು ಅತ್ಯಲ್ಪ ಕಾಲದಲ್ಲಿಯೇ ಹಿಂದಿ, ಇಂಗ್ಲಿಷ್, ಮರಾಠಿ, ತೆಲುಗು, ಗುಜರಾತಿ ಇತ್ಯಾದಿ ಅನುವಾದಗಳೊಂದಿಗೆ ಆಯಾ ರಾಜ್ಯಗಳಲ್ಲಿ ಪ್ರಕಟವಾಗಿದ್ದು, ಇದುವರೆಗೆ ಇದರ ಅನೇಕ ಲಕ್ಷ ಪ್ರತಿಗಳು ಮಾರಾಟವಾಗಿವೆ.

ಸಂಸ್ಕೃತ ಪ್ರಕಾಶನ ಲೋಕದಲ್ಲಿ ಇತಿಹಾಸವನ್ನು ನಿರ್ಮಿಸಿರುವ ಈ ಜನಪ್ರಿಯ ಹೊತ್ತಿಗೆಯ ಯಶಸ್ಸಿಗೆ ಕಾರಣರಾದ ಎಲ್ಲ ಸಹಕಾರಿಗಳಿಗೂ, ವಾಚಕ ಬಂಧುಗಳಿಗೂ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

- **ಪ್ರಕಾಶಕಃ**

# ಉಪಯೋಗಿಸುವ ಮುನ್ನ ...

* ಈ ಪುಸ್ತಕದಲ್ಲಿ ಸಾಮಾನ್ಯವಾಗಿ ಶಬ್ದಾನುವಾದವನ್ನೇ ಆಶ್ರಯಿಸಿದೆ. ಕೆಲವೆಡೆ ಶಬ್ದಾನುವಾದ ಅಶಕ್ಯ. ಅಂತಹ ಸ್ಥಳಗಳಲ್ಲಿ ಭಾವಾನುವಾದವನ್ನು ಆಶ್ರಯಿಸಿದೆ. ಇಂತಹ ಸ್ಥಳಗಳನ್ನು (ಬಹುತೇಕ) ರೇಖೆಯಿಂದ ಸೂಚಿಸಿದೆ.

* ಪುಸ್ತಕದಲ್ಲಿ ''ನೀನು'' ಎಂಬುದಕ್ಕೆ ''ಭವಾನ್'' (ತಾವು) ಎಂಬುದನ್ನು ಉಪಯೋಗಿಸಿದೆ. ಪ್ರಯೋಗಸೌಲಭ್ಯವೇ ಇದಕ್ಕೆ ಕಾರಣ. ಸಂದರ್ಭಾನುಸಾರವಾಗಿ 'ನೀನು' 'ನೀವು' 'ತಾವು' - ಈ ಮೂರು ಅರ್ಥವನ್ನೂ ಬರೆದಿದೆ.

* ಇಲ್ಲಿ ಕೊಟ್ಟಿರುವ ವಾಕ್ಯಗಳು – ಕೆಲವು ''ಮಾದರಿಗಳು'' ಮಾತ್ರ. ಇದೇ ದಿಸೆಯಲ್ಲಿ ಬೇಕಾದ ವಾಕ್ಯಗಳನ್ನು ರಚಿಸಬಹುದಾಗಿದೆ. ಇದಕ್ಕೆ ಅನುಕೂಲವಾಗುವಂತೆ ಅಲ್ಲಲ್ಲಿ ಯೋಜಿಸಬಹುದಾದ ಶಬ್ದಗಳನ್ನು ಆವರಣದಲ್ಲಿ ಕೊಟ್ಟಿದೆ. (ಉದಾ - ಪುಟ ೨)

## ಇಲ್ಲಿವೆ, ನಿಮ್ಮ ಪುಟಗಳು ...

* * *

# ೧. ಶಿಷ್ಟಾಚಾರಃ

| | |
|---|---|
| ಹರಿಃ ಓಂ | ಹಲೋ (Hellow) |
| ಸುಪ್ರಭಾತಮ್ | ಸುಪ್ರಭಾತ |
| ನಮಸ್ತೇ / ನಮಸ್ಕಾರಃ | ನಮಸ್ಕಾರ |
| ಶುಭರಾತ್ರಿಃ | ಶುಭರಾತ್ರಿ |
| ಧನ್ಯವಾದಾಃ | ಧನ್ಯವಾದ |
| ಸ್ವಾಗತಮ್ | ಸ್ವಾಗತ |
| ಕ್ಷಮ್ಯತಾಮ್ | ಕ್ಷಮಿಸಿ |
| ಚಿಂತಾ ಮಾಸ್ತು | ಪರವಾ ಇಲ್ಲ (Don't worry) |
| ಕೃಪಯಾ | ದಯವಿಟ್ಟು |
| ಪುನಃ ಮಿಲಾಮಃ | ಮತ್ತೆ ಸಿಗೋಣ |
| ಅಸ್ತು | ಆಗಲಿ / ಸರಿ (O.K. / All right) |
| ಶ್ರೀಮನ್ | ಸ್ವಾಮೀ (Sir) |
| ಮಾನ್ಯೇ / ಆರ್ಯೇ | ಮಾನ್ಯೇ (Madam) |
| ಸಾಧು ಸಾಧು | ತುಂಬಾ ಒಳ್ಳೇದು (Very good) |

## ಮಿಲನಮ್

| | |
|---|---|
| ಭವತಃ ನಾಮ ಕಿಂ ? (ಪು) | ತಮ್ಮ ಹೆಸರು ? |
| ಭವತ್ಯಾಃ ನಾಮ ಕಿಂ ? (ಸ್ತ್ರೀ) | ತಮ್ಮ ಹೆಸರು ? |
| ಮಮ ನಾಮ '......' | ನನ್ನ ಹೆಸರು '......' |
| ಏಷಃ ಮಮ ಮಿತ್ರಂ '......' | ಇವನು ನನ್ನ ಗೆಳೆಯ '......' |
| ಏತಸ್ಯ ನಾಮ ಶ್ರುತವಾನ್ | ಇವನ ಹೆಸರು ಕೇಳಿದೀನಿ. |
| ಏಷಾ ಮಮ ಸಖೀ '......' | ಇವಳು ನನ್ನ ಗೆಳತಿ '......' |
| ಭವಾನ್ (ಪು) / ಭವತೀ (ಸ್ತ್ರೀ) ಕಿಂ ಉದ್ಯೋಗಂ ಕರೋತಿ ? | ನೀವು ಏನು ಕೆಲಸ ಮಾಡುತ್ತಿದ್ದೀರಿ ? |
| ಅಹಂ ಅಧ್ಯಾಪಕಃ (ಪು) ಅಸ್ಮಿ | ನಾನು ಅಧ್ಯಾಪಕನಾಗಿದ್ದೀನಿ. |
| ಅಹಂ ಅಧ್ಯಾಪಿಕಾ (ಸ್ತ್ರೀ) ಅಸ್ಮಿ | ನಾನು ಅಧ್ಯಾಪಿಕೆಯಾಗಿದ್ದೀನಿ. |

| | |
|---|---|
| ಅಧಿಕಾರೀ – ಆಫೀಸರ್ | ಲಿಪಿಕಃ – ಕ್ಲರ್ಕ್ |
| ಉಟ್ಟಂಕಕಃ – ಟೈಪಿಸ್ಟ್ | ನ್ಯಾಯವಾದೀ – ವಕೀಲ |
| ತಂತ್ರಜ್ಞಃ – ಎಂಜಿನೀಯರ್ | ವಿಕ್ರಯಿಕಃ – ಸೇಲ್ಸ್‌ಮನ್ |
| ಪ್ರಾಧ್ಯಾಪಕಃ – ಪ್ರೊಫೆಸರ್ | ಉಪನ್ಯಾಸಕಃ – ಲೆಕ್ಚರರ್ |

| | |
|---|---|
| ಅಹಂ ಯಂತ್ರಾಗಾರೇ ಅಸ್ಮಿ | ನಾನು ಫ್ಯಾಕ್ಟರಿಯಲ್ಲಿ ಇದೀನಿ. |

| | |
|---|---|
| ಕಾರ್ಯಾಲಯೇ – ಆಫೀಸಿನಲ್ಲಿ | ಯಂತ್ರಾಗಾರೇ – ಫ್ಯಾಕ್ಟರಿಯಲ್ಲಿ |
| ವಿತ್ತಕೋಷೇ – ಬ್ಯಾಂಕಿನಲ್ಲಿ | ಚಿಕಿತ್ಸಾಲಯೇ – ಆಸ್ಪತ್ರೆಯಲ್ಲಿ |
| ಪ್ರೌಢಶಾಲಾಯಾಂ – ಹೈಸ್ಕೂಲಿನಲ್ಲಿ | ಮಹಾವಿದ್ಯಾಲಯೇ – ಕಾಲೇಜಿನಲ್ಲಿ |

| ಸಂಸ್ಕೃತ | ಕನ್ನಡ |
| --- | --- |
| ಭವಾನ್ (ಪು) / ಭವತೀ (ಸ್ತ್ರೀ) } ಕಿಂ ಪಠತಿ ? | ನೀವು ಏನು ಓದುತ್ತಿದ್ದೀರಿ ? |
| ಅಹಂ ನವಮಕಕ್ಷ್ಯಾಯಾಂ ಪಠಾಮಿ | ನಾನು ಒಂಭತ್ತನೇ ತರಗತಿಯಲ್ಲಿ ಓದುತ್ತಿದ್ದೇನೆ. |
| ಅಹಂ ಬಿ.ಎಸ್‌ಸಿ.* ಪಠಾಮಿ | ನಾನು ಬಿ.ಎಸ್‌ಸಿ. ಓದ್ತಿದೀನಿ. |
| ಭವತಃ** ಗ್ರಾಮಃ ? | ತಮ್ಮ ಊರು ? |
| ಮಮ ಗ್ರಾಮಃ '......' | ನನ್ನ ಊರು '......' |
| ಕುಶಲಂ ವಾ ? | ಕುಶಲವೇ ? |
| ಗೃಹೇ ಸರ್ವೇ ಕುಶಲಿನಃ ವಾ ? | ಮನೆಯಲ್ಲಿ ಎಲ್ಲಾ ಚೆನ್ನಾಗಿದ್ದಾರಾ ? |
| ಸರ್ವಂ ಕುಶಲಂ | ಎಲ್ಲಾ ಕ್ಷೇಮ. |
| ಏವಂ ಅಸ್ಮಿ | ಹೀಗಿದೀನಿ. |
| ಕಃ ವಿಶೇಷಃ ? | ಏನು ವಿಶೇಷ ? |
| <u>ಭವತಾ ಏವ ವಕ್ತವ್ಯಂ</u> | ನೀವೇ ಹೇಳಬೇಕು. |
| ಅನ್ಯಃ ಕಃ ವಿಶೇಷಃ ? | ಮತ್ತೇನು ವಿಶೇಷ ? |
| ಕುತಃ ಆಗಚ್ಛತಿ ? | ಎಲ್ಲಿಂದ ಬರುತ್ತಿದ್ದೀರಿ ? |
| ಶಾಲಾತಃ / ಗೃಹತಃ / ...ತಃ } ಆಗಚ್ಛಾಮಿ | ಶಾಲೆಯಿಂದ / ಮನೆಯಿಂದ / ...ಇಂದ } ಬರುತ್ತಿದ್ದೇನೆ. |
| ಕುತ್ರ ಗಚ್ಛತಿ ? | ಎಲ್ಲಿಗೆ ಹೊರಟಿದ್ದು ? |

---

* ಇದೇ ರೀತಿ 'ಪದವೀಪ್ರಥಮವರ್ಷೇ' ಇತ್ಯಾದಿ ಸೇರಿಸಿಕೊಳ್ಳಬೇಕು.

** ಇನ್ನು ಮುಂದೆ 'ಭವತಃ' ಎಂದು ಬಂದಲ್ಲಿ ಪುರುಷನನ್ನು ಕುರಿತು ಎಂದು ತಿಳಿಯಬೇಕು. ಸ್ತ್ರೀಯನ್ನು ಕುರಿತು ಹೇಳಬೇಕಾಗಿದ್ದಲ್ಲಿ 'ಭವತ್ಯಾಃ' ಎಂದು ಬದಲಿಸಿ ಹೇಳಬೇಕು.

| | |
|---|---|
| ದೇವಾಲಯಂ<br>ಕಾರ್ಯಾಲಯಂ<br>ವಿಪಣಿಂ } ಗಚ್ಛಾಮಿ | ದೇವಾಲಯಕ್ಕೆ<br>(ದೇವಾಲಯವನ್ನು ಕುರಿತು)<br>ಕಾರ್ಯಾಲಯಕ್ಕೆ<br>ಮಾರ್ಕೆಟ್ಟಿಗೆ } ಹೊರಟಿದ್ದೇನೆ. |
| ಕಿಂ, ಚಿರಾದ್ ದರ್ಶನಮ್ ? | ಏನು, ಬಹಳ ಅಪರೂಪ ? |
| ಭವಂತಂ ಕುತ್ರಾಪಿ ದೃಷ್ಟವಾನ್ | ನಿಮ್ಮನ್ನೆಲ್ಲೋ ನೋಡಿದೀನಿ. |
| ಭವಾನ್ ಸಂಭಾಷಣಶಿಬಿರಂ ಆಗತವಾನ್ ವಾ ? | ನೀವು ಸಂಭಾಷಣಶಿಬಿರಕ್ಕೆ ಬಂದಿದ್ದಿರಾ ? |
| ತರ್ಹಿ ಕುತ್ರ ದೃಷ್ಟವಾನ್ ? | ಹಾಗಾದರೆ ಎಲ್ಲಿ ನೋಡಿದೀನಿ ? |
| ತರ್ಹಿ ತತ್ರೈವ ದೃಷ್ಟವಾನ್ | ಹಾಗಾದರೆ ಅಲ್ಲೇ ನೋಡಿದ್ದು. |

# ಲಘುವಾಕ್ಯಾನಿ

೩.

| | |
|---|---|
| ತಥೈವ ಅಸ್ತು | ಹಾಗೇ ಆಗಲಿ. |
| ಜಾನಾಮಿ ಭೋಃ ! | ಗೊತ್ತು, ಕಣಯ್ಯ ! |
| ಆಂ, ಏವಂ ಏವ | ಹೌದು, ಹಾಗೆಯೇ. |
| ಸಮೀಚೀನಾ ಸೂಚನಾ | ಒಳ್ಳೇ ಸಲಹೆ. |
| ಕಿಂಚಿತ್ ಏವ | ಸ್ವಲ್ಪಮಾತ್ರ / ಸ್ವಲ್ಪಮಟ್ಟಿಗೆ. |
| ಕಿಮರ್ಥಂ ನ ಭವತಿ ? | ಯಾಕೆ ಆಗೋಲ್ಲ ? |
| ಭವತು ನಾಮ | ಆಗಲಿ ಬಿಡಿ. |
| ಓಹೋ ! ಏವಂ ವಾ ? | ಓಹೋ ! ಹೀಗೋ ? |
| ತಥಾ ವಾ ? | ಹಾಗೋ ? |
| ಏವಮಪಿ ಅಸ್ತಿ ವಾ ? | ಹೀಗೂ ಇದೆಯಾ ? |
| ಅಥ ಕಿಮ್ ? | ಮತ್ತೆ ? |
| ನೈವ ಕಿಲ ! | ಇಲ್ವಲ್ಲ ! |
| ಭವತು | ಆಗಲಿ. |
| ಆಗಚ್ಛತು | ಬನ್ನಿ. |
| ಉಪವಿಶತು | ಕುಳಿತುಕೊಳ್ಳಿ. |
| ಸರ್ವಥಾ ಮಾಸ್ತು | ಖಂಡಿತ ಬೇಡ. |
| ಕಿಮ್ ಅನ್ಯತ್ ? | ಮತ್ತೇನು ? |

| | |
|---|---|
| ಅಸ್ತು ವಾ ? | ಆಗಬಹುದಾ ? |
| ಕಿಮರ್ಥಂ ಭೋಃ ? | ಯಾಕಪ್ಪಾ ? |
| ಲಬ್ಧಂ ಕಿಲ ? | ಸಿಕ್ತು ತಾನೇ ? |
| 'ಶಕ್ಯತೇ ವಾ' ಇತಿ ಪಶ್ಯಾಮಃ | ಆಗುತ್ತಾ ನೋಡೋಣ. |
| ಜ್ಞಾತಂ ವಾ ? | ಗೊತ್ತಾಯ್ತಾ ? |
| ಕಥಂ ಆಸೀತ್ ? | ಹೇಗಿತ್ತು ? |
| ಅಂಗೀಕೃತಂ ಕಿಲ ? | ಒಪ್ಕೊಂಡೆ ತಾನೇ ? |
| ಕತಿ ಅಪೇಕ್ಷಿತಾನಿ ? | ಎಷ್ಟು ಬೇಕು ? |
| ಅದ್ಯ ಏವ ವಾ ? | ಇವತ್ತೇನಾ ? |
| ಇದಾನೀಂ ಏವ ವಾ ? | ಈಗ್ಲೇನಾ ? |
| ಆಗಂತವ್ಯಂ ಭೋಃ | ಬರಬೇಕು ಕಣಯ್ಯ. |
| ತದರ್ಥಂ ವಾ ! | ಅದಕ್ಕೋ ! |
| ತತ್ ಕಿಮಪಿ ಮಾಸ್ತು | ಅದೇನೂ ಬೇಡ. |
| ನ ದೃಶ್ಯತೇ ! | ಕಾಣ್ತಾ ಇಲ್ಲ ! |
| ಸಮಾಪ್ತಂ ವಾ ? | ಮುಗಿಯಿತಾ ? |
| ಕಸ್ಮಿನ್ ಸಮಯೇ ? | ಎಷ್ಟೊತ್ತಿಗೆ ? |
| ತಥಾಽಪಿ...... | ಹಾಗಿದ್ರೂ ಕೂಡ...... |
| ಆವಶ್ಯಕಂ ನ ಆಸೀತ್ | ಬೇಡಾಗಿತ್ತು, |
| ತಿಷ್ಠತು ಭೋಃ | ಇರಯ್ಯಾ. |
| ಸ್ಮರತಿ ಕಿಲ ? | ನೆನಪಿದೆ ತಾನೇ ? |

| | |
|---|---|
| ತಥಾ ಕಿಮಪಿ ನಾಸ್ತಿ | ಹಾಗೇನೂ ಇಲ್ಲ. |
| ಕಥಂ ಅಸ್ತಿ ಭವಾನ್ ? | ಹೇಗಿದೀರಿ ? |
| ಮಾ ವಿಸ್ಮರತು | ಮರೆಯಬೇಡ, |
| ನಿಸ್ಸಂಕೋಚಂ ವದತು | ನಿಸ್ಸಂಕೋಚವಾಗಿ ಹೇಳಿ. |
| ಅನ್ಯಚ್ಚ...... | ಅಲ್ಲದೇ...... |
| ತದನಂತರಮ್...... | ಅನಂತರ...... |
| ಏತಾವದೇವ ಕಿಲ ? | ಇಷ್ಟೇ ತಾನೇ ? |
| ಮಹಾನ್ ಸಂತೋಷಃ | ತುಂಬಾ ಸಂತೋಷ. |
| ತತ್ ತಥಾ ನ | ಅದು ಹಾಗಲ್ಲ. |
| ತಸ್ಯ ಕಃ ಅರ್ಥಃ ? | ಹಾಗೆಂದರೇನು ? |
| ಆಮ್, ಭೋಃ | ಹೌದಪ್ಪಾ. |
| ಏವಮೇವ...... | ಸುಮ್ನೇ / ಹೀಗೆಯೇ...... |
| ತನ್ನಾಮ...... | ಅಂದರೆ...... |

## ಸಾಮಾನ್ಯವಾಕ್ಯಾನಿ

| | |
|---|---|
| ಪ್ರಯತ್ನಂ ಕರೋಮಿ | ಪ್ರಯತ್ನ ಮಾಡ್ತೀನಿ. |
| ನ ಶಕ್ಯತೇ ಭೋಃ | ಆಗೋಲ್ಲ ಕಣಯ್ಯ. |
| ಏವಂ / ತಥಾ ನ ವದತು | ಹೀಗೆ / ಹಾಗೆ ಹೇಳಬೇಡ. |
| ತತ್ರ ಕೋಽಪಿ ಸಂದೇಹಃ ನಾಸ್ತಿ | ಅದ್ರಲ್ಲೇನೂ ಸಂದೇಹವಿಲ್ಲ. |
| ಅಹಂ ನ ಜ್ಞಾತವಾನ್ | ನನಗೆ ಗೊತ್ತಾಗಿಲ್ಲ. |
| ಕದಾ ದದಾತಿ ? | ಯಾವಾಗ ಕೊಡುತ್ತೀ ? |
| ಅಹಂ ಕಥಂ ವದಾಮಿ ? | ನಾನು ಹ್ಯಾಗೆ ಹೇಳಲಿ ? |
| ತಥಾ ಭವತಿ ವಾ ? | ಹಾಗೆ ಆಗುತ್ತಾ ? |
| ಭವತಃ ಸಮಯಾವಕಾಶಃ ಅಸ್ತಿ ವಾ? | ನಿಮಗೆ ಪುರುಸೊತ್ತು ಇದೆಯಾ ? |
| ಅದ್ಯ ಭವತಃ ಕಾರ್ಯಕ್ರಮಃ ಕಃ ? | ಇವತ್ತು ನಿಮ್ಮ ಕಾರ್ಯಕ್ರಮ ಏನು ? |
| ಅರೇ ! ಹಸ್ತಸ್ಯ / ಪಾದಸ್ಯ ಕಿಂ ಅಭವತ್ ? | ಅರೇ ! ಕೈಗೆ / ಕಾಲಿಗೆ ಏನಾಯ್ತು ? |
| ಬಹುದಿನೇಭ್ಯಃ ತೇ ಪರಿಚಿತಾಃ | ಬಹಳ ದಿನಗಳಿಂದ ಅವರು ಪರಿಚಿತರು. |
| ತಸ್ಯ ಕಿಯದ್ ಧೈರ್ಯಂ / ಧಾರ್ಷ್ಟ್ಯಂ ? | ಅವನಿಗೆ ಎಷ್ಟು ಧೈರ್ಯ / ಸೊಕ್ಕು ? |
| ಭವಾನ್ ನ ಉಕ್ತವಾನ್ ಏವ | ನೀನು ಹೇಳಲೇ ಇಲ್ಲ. |
| ಅಹಂ ಕಿಂ ಕರೋಮಿ ? | ನಾನೇನು ಮಾಡಲಿ ? |
| ಅಹಂ ನ ಜಾನಾಮಿ | ನನಗೆ ಗೊತ್ತಿಲ್ಲ. |

| | |
|---|---|
| ಯಥಾ ಭವಾನ್ ಇಚ್ಛತಿ ತಥಾ | ನೀವು ಹೇಗೆ ಇಚ್ಛಿಸುತ್ತೀರೋ (ಹೇಳ್ತೀರೋ) ಹಾಗೆ |
| ಭವತು, ಕಿಂ ತೇನ ? | ಆಗಲಿ, ಏನು ಅದರಿಂದ ? |
| ತೇನ ಕಿಮಪಿ ನ ಸಿಧ್ಯತಿ | ಅದರಿಂದ ಏನೂ ಆಗೋಲ್ಲ. |
| ಸಃ ಸರ್ವಥಾ ಅಪ್ರಯೋಜಕಃ | ಅವನು ಯಾತಕ್ಕೂ ಪ್ರಯೋಜನವಿಲ್ಲ. |
| ಪ್ರಯೋಜನಮ್ ಏವ ನಾಸ್ತಿ | ಸರ್ವಥಾ ಪ್ರಯೋಜನವಿಲ್ಲ. (Hopeless) |
| ಏಕವಾರಂ ಪ್ರಯತ್ನಂ ಕುರ್ಮಃ | ಒಮ್ಮೆ ಪ್ರಯತ್ನ ಮಾಡೋಣ. |
| ಮೌನಮ್ ಏವ ಉಚಿತಮ್ | ಸುಮ್ನೆ ಇರೋದು ವಾಸಿ. |
| ತಸ್ಮಿನ್ ವಿಷಯೇ ಅಹಂ ಕಿಮಪಿ ನ ವದಾಮಿ | ಆ ವಿಷಯದಲ್ಲಿ ನಾನು ಏನೂ ಹೇಳೋಲ್ಲ. |
| ವಿಚಿಂತ್ಯ ವಕ್ತವ್ಯಮ್ | ಯೋಚ್ನೆ ಮಾಡಿ ಹೇಳ್ಬೇಕು. |
| ತರ್ಹಿ ಸಮೀಚೀನಮ್ | ಹಾಗಾದರೆ ಸರಿ. |
| ಏವಂ ಚೇತ್ ಕಥಂ ? | ಹೀಗಾದರೆ ಹೇಗೆ ? |
| ಮಾಂ ಕಿಂಚಿತ್ ಸ್ಮಾರಯತು | ನನಗೆ ಸ್ವಲ್ಪ ಜ್ಞಾಪಿಸು. |
| ತಂ ಅಹಂ ಸಮ್ಯಕ್ ಜಾನಾಮಿ | ಅವನು ನನಗೆ ಚೆನ್ನಾಗಿ ಗೊತ್ತು. |
| ತದಾನೀಂ ಏವ ಉಕ್ತಂ ಕಿಲ ? | ಆಗ್ಲೆ ಹೇಳಲಿಲ್ವೆ ? |
| ಕದಾ ಉಕ್ತಂ ಭೋಃ ? | ಯಾವಾಗಯ್ಯಾ ಹೇಳಿದ್ದು ? |
| ಯತ್ಕಿಮಪಿ ಭವತು | ಏನ್ ಬೇಕಾದ್ರೂ ಆಗಲಿ. |
| ಸಃ ಬಹು ಸಮೀಚೀನಃ | ಅವನು ತುಂಬ ಒಳ್ಳೆಯವನು. |
| ಸಃ ಬಹು ರೂಕ್ಷಃ | ಅವನು ತುಂಬಾ ಒರಟು. |
| ತದ್ವಿಷಯೇ ಚಿಂತಾ ಮಾಸ್ತು | ಆ ವಿಷಯದಲ್ಲಿ ಚಿಂತೆ ಬೇಡ. |
| ತಥೈವ ಇತಿ ನ ನಿಯಮಃ | 'ಹಾಗೇ' ಅಂತೇನೂ ಇಲ್ಲ. |

| | |
|---|---|
| ಕರ್ತುಂ ಶಕ್ಯಂ, ಕಿಂಚಿತ್ ಸಮಯಃ ಅಪೇಕ್ಷ್ಯತೇ | ಮಾಡಬಹುದು, ಸ್ವಲ್ಪ ಸಮಯ ಬೇಕಾಗುತ್ತೆ. |
| ಏತಾವತ್ ವಾ ಕೃತವಾನ್ ! | ಇಷ್ಟಾದರೂ ಮಾಡಿದ ! |
| ದ್ರಷ್ಟುಂ ಏವ ನ ಶಕ್ಯತೇ | ನೋಡಕ್ಕಾಗೋಲ್ಲ. |
| ತತ್ರೈವ ಕುತ್ರಾಪಿ ಸ್ಯಾತ್ | ಅಲ್ಲೇ ಎಲ್ಲಾದ್ರೂ ಇದ್ದೀತು. |
| ಯಥಾರ್ಥಂ ವದಾಮಿ | ನಿಜವಾಗಿ ಹೇಳ್ತಾ ಇದೀನಿ. |
| ಏವಂ ಭವಿತುಂ ಅರ್ಹತಿ | ಹೀಗೆ ಆಗಬಹುದು. |
| ಕದಾಚಿತ್ ಏವಂ ಅಪಿ ಸ್ಯಾತ್ | ಕೆಲವೊಮ್ಮೆ ಹೀಗೂ ಇರಬಹುದು. |
| ಅಹಂ ತಾವದಪಿ ನ ಜಾನಾಮಿ ವಾ? | ನನಗೆ ಅಷ್ಟೂ ಗೊತ್ತಿಲ್ಲವಾ ? |
| ಕಃ ವಾ ನ ಇಚ್ಛತಿ ? | ಯಾರಿಗೆ ಬೇಡ ಹೇಳು ? |
| ತತ್ರ ಗತ್ವಾ ಕಿಂ ಕರೋತಿ ? | ಅಲ್ಲಿ ಹೋಗಿ ಏನು ಮಾಡ್ತೀಯಾ ? |
| ಪುನಃ ಆಗಚ್ಛಂತು | ಮತ್ತೆ ಬನ್ನಿ. |
| ಮಮ ಕಿಮಪಿ ಕ್ಲೇಶಃ ನಾಸ್ತಿ | ನನಗೇನೂ ತೊಂದರೆಯಿಲ್ಲ. |
| ಅತ್ರ ಕಿಂ ಕಷ್ಟಮ್ ? | ಇದರಲ್ಲೇನು ಕಷ್ಟ ? |
| ಭೋಃ, ಆನೀತವಾನ್ ವಾ ? | ತಂದ್ಯೇನಪ್ಪಾ ? |
| ಭವಂತಂ ಕಃ ಉಕ್ತವಾನ್ ? | ನಿಮಗೆ ಯಾರು ಹೇಳಿದ್ದು ? |
| ಯದಾ ಕದಾ ವಾ ಆಗಚ್ಛೇತ್ | ಯಾವಾಗಲಾದರೂ ಬಂದಾನು/ ಬಂದೀತು. |
| ಪ್ರಾಯಃ ತಥಾ ನ ಸ್ಯಾತ್ | ಬಹುತೇಕ ಹಾಗಿರಲಾರದು. |
| ಚಿಂತಾ ಮಾಸ್ತು, ಶ್ವಃ ದದಾತು | ಪರವಾ ಇಲ್ಲ. ನಾಳೆ ಕೊಡಿ. |
| ಅಹಂ ಪುನಃ ಸೂಚಯಾಮಿ | ನಾನು ಮತ್ತೆ ತಿಳಿಸುತ್ತೇನೆ. |
| ಅದ್ಯ ಆಸೀತ್ ವಾ ? | ಇವತ್ತು ಇತ್ತಾ ? |
| ಅವಶ್ಯಂ ಆಗಚ್ಛಾಮಿ | ಖಂಡಿತ ಬರ್ತೀನಿ. |

'ನಾಗರಾಜಃ' ಅಸ್ತಿವಾ ? — ನಾಗರಾಜರು ಇದಾರಾ ?

ಇದಂ ಕಥಂ ಏವಂ ಜಾತಮ್ ? — ಇದ್ಯಾಕೆ ಹೀಗಾಯ್ತು ?

ತತ್ರ ಆಸೀತ್ ವಾ ? — ಅಲ್ಲಿ ಇತ್ತಾ ?

ಕಿಮಪಿ ಉಕ್ತಂ ವಾ ? — ಏನಾದರೂ ಹೇಳಿದರಾ ?

ಕುತಃ ಆನೀತಮ್ ? — ಎಲ್ಲಿಂದ ತಂದದ್ದು ?

ಅನ್ಯತ್ ಕಿಮಪಿ ಕಾರ್ಯಂ ನಾಸ್ತಿ — ಬೇರೆ ಏನೂ ಕೆಲಸವಿಲ್ಲ.

ಮಮ ವಚನಂ ಕಿಂಚಿತ್ ಶೃಣೋತು — ನನ್ನ ಮಾತು ಸ್ವಲ್ಪ ಕೇಳು

ಏತತ್ ಸತ್ಯಂ ಕಿಲ ? — ಇದು ನಿಜ ತಾನೆ ?

ತತ್ ಅಹಂ ಅಪಿ ಜಾನಾಮಿ — ಅದು ನಂಗೂ ಗೊತ್ತು.

ತಾವತ್ ಆವಶ್ಯಕಂ ನ — ಅಷ್ಟೇನೂ ಬೇಕಾದದ್ದಲ್ಲ.

ಭವತಃ ಕಾ ಹಾನಿಃ ? — ನಿಮಗೇನು ಹಾನಿ ?

ಕಿಮರ್ಥಂ ಏತಾವಾನ್ ವಿಲಂಬಃ ? — ಯಾಕೆ ಇಷ್ಟು ಹೊತ್ತು ?

ಯಥೇಷ್ಟಂ ಅಸ್ತಿ — ಯಥೇಷ್ಟವಾಗಿದೆ.

ಭವತಃ ಅಭಿಪ್ರಾಯಃ ಕಃ ? — ನಿಮ್ಮ ಅಭಿಪ್ರಾಯ ಏನು ?

ತಸ್ಯ ಕಿಂ ಕಾರಣಮ್ ? — ಅದಕ್ಕೆ ಏನು ಕಾರಣ ?

ಸ್ವಯಂ ಏವ ಕರೋತಿ ? — ಸ್ವತಃ ಮಾಡ್ತೀಯಾ ?

ತತ್ ಮಮ ಕೃತೇ ನ ರೋಚತೇ — ಅದು ನಂಗೆ ಹಿಡಿಸೋಲ್ಲ.

ಉಕ್ತಂ ಏವ ವದತಿ ಸಃ — ಹೇಳಿದ್ದನ್ನೇ ಹೇಳ್ತಾನೆ ಅವನು.

ಅನ್ಯಥಾ ಬಹು ಕಷ್ಟಮ್ — ಇಲ್ಲಾಂದ್ರೆ ತುಂಬಾ ಕಷ್ಟ.

ಕಿಮರ್ಥಂ ಪೂರ್ವಂ ನ ಉಕ್ತಮ್ ? — ಯಾಕೆ ಮೊದಲೇ ಹೇಳಲಿಲ್ಲ ?

ಸಮ್ಯಕ್ ನ ಜಾನಾಮಿ — ಸರಿಯಾಗಿ ಗೊತ್ತಿಲ್ಲ.

ನಿಶ್ಚಯಃ ನಾಸ್ತಿ — ನಿಶ್ಚಯವಿಲ್ಲ.

| | |
|---|---|
| ಕುತ್ರ ಆಸೀತ್ ಭವಾನ್ ? | ಎಲ್ಲಿ ಇದ್ದೆ ನೀನು ? |
| ಭಯಸ್ಯ ಕಾರಣಂ ನಾಸ್ತಿ | ಹೆದರಬೇಕಾಗಿಲ್ಲ. |
| ತದ್ವಿಷಯೇ ಮಹತೀ ಪ್ರೀತಿಃ | ಅದರ ವಿಷಯದಲ್ಲಿ / ಅವನ ವಿಷಯದಲ್ಲಿ } ತುಂಬ ಪ್ರೀತಿ. |
| ಕಿಯತ್ ಲಜ್ಜಾಸ್ಪದಮ್ ! | ಎಂಥಾ ನಾಚಿಕೇಡು ! |
| ಏಷಃ ಮಮ ದೋಷಃ ನ | ಇದು ನನ್ನ ತಪ್ಪಲ್ಲ. |
| ಮಮ ತು ಆಕ್ಷೇಪಃ ನಾಸ್ತಿ | ನಂದೇನೂ ಆಕ್ಷೇಪವಿಲ್ಲ. |
| ಸಃ ಶೀಘ್ರಕೋಪೀ | ಅವನು ಮುಂಗೋಪಿ. |
| ತೀವ್ರಂ ಮಾ ಪರಿಗಣಯತು | ವಿಪರೀತವಾಗಿ ತಗೋಬೇಡ. (Serious) |
| ಆಗತಃ ಏಷಃ ವರಾಕಃ | ಬಂದು ವಕ್ಕರಿಸಿದ. |
| ಯುಕ್ತೇ ಸಮಯೇ ಆಗತವಾನ್ | ಸರಿಯಾದ ಸಮಯಕ್ಕೆ ಬಂದೆ. |
| ಬಹು ಜಲ್ಪತಿ ಭೋಃ ! | ತುಂಬಾ ಹರಟ್ತಾನೆ ಕಣಯ್ಯಾ ! |
| ಏಷಾ ಕೇವಲಂ ಕಿಂವದಂತೀ | ಇದು ಬರೀ ಗಾಳಿ ಮಾತು (ಸುದ್ದಿ) |
| ಕಿಮಪಿ ನ ಭವತಿ | ಏನೂ ಆಗೊಲ್ಲ. |
| ಏವಮೇವ ಆಗತವಾನ್ | ಹೀಗೇ ಬಂದೆ. |
| ವಿನಾ ಕಾರಣಂ ಕಿಮರ್ಥಂ ಗಂತವ್ಯಮ್ ? | ಸುಮ್ನೆ ಯಾಕೆ ಹೋಗ್ಬೇಕು ? |
| ಭವತಃ ವಚನಂ ಸತ್ಯಮ್ | ನಿಮ್ಮ ಮಾತು ನಿಜ. |
| ಮಮ ವಚನಂ ಕಃ ಶೃಣೋತಿ ? | ನನ್ನ ಮಾತನ್ನು ಯಾರು ಕೇಳ್ತಾರೆ ? |
| ತದಾ ಕಿಮಪಿ ನ ಸ್ಫುರಿತಮ್ | ಆಗ ಏನೂ ತೋಚಲೇ ಇಲ್ಲ. |
| ಕಿಮರ್ಥಂ ತಾವತೀ ಚಿಂತಾ ? | ಯಾಕೆ ಅಷ್ಟೆಲ್ಲ ಚಿಂತೆ ? |
| ಭವತಃ ಕಿಮಸ್ತಿ ಕಷ್ಟಮ್ ? | ನಿಮಗೇನು ತೊಂದರೆಯಿದೆ ಹೇಳಿ ? |
| ಛೇ, ಏವಂ ನ ಭವಿತವ್ಯಂ ಆಸೀತ್ | ಛೇ, ಹೀಗಾಗಬಾರದಿತ್ತು. |
| ಅನ್ಯಥಾ ಮಾ ಚಿಂತಯತು | ತಪ್ಪು ತಿಳ್ಕೋಬೇಡಿ. |

(ಸಾಮಾನ್ಯ ಮಿಲನಮ್ + ಆಕಸ್ಮಾತ್ ದರ್ಶನಮ್)

| | |
|---|---|
| ನಮೋ ನಮಃ | ನಮೋ ನಮಃ |
| ಕಿಂ ಭೋಃ? ದರ್ಶನಂ ಏವ ನಾಸ್ತಿ ! | ಏನಯ್ಯ ? ದರ್ಶನವೇ ಇಲ್ಲ ! |
| ನೈವ, ಅತ್ರೈವ ಸಂಚರಾಮಿ ಕಿಲ ! | ಇಲ್ವಲ್ಲ, ಇಲ್ಲೆ ಓಡಾಡ್ತಾ ಇರ್ತೀನಲ್ಲ ! |
| ಕಿಂ ಭೋಃ? ವಾರ್ತಾ ಏವ ನಾಸ್ತಿ ? | ಏನಯ್ಯ, ಪತ್ತೆಯೇ ಇಲ್ಲ ? |
| ಕಿಂ ಭೋಃ? ಏಕಂ ಪತ್ರಂ ಅಪಿ ನಾಸ್ತಿ ? | ಏನಯ್ಯ ? ಒಂದು ಪತ್ರ ಕೂಡ ಇಲ್ಲ ! |
| ವಯಂ ಸರ್ವೇ ವಿಸ್ಮೃತಾಃ ಕಿಲ ? | ನಾವೆಲ್ಲ ಮರೆತುಹೋಗ್ಬಿಟ್ವಿ ಅಲ್ವಾ ? |
| ಕಥಂ ವಿಸ್ಮರಣಂ ಭವತಿ ಭೋಃ ? | ಹೇಗಯ್ಯಾ ಮರೆತುಹೋಗೋದು ? |
| ಭವತಃ ಸಂಕೇತಂ ಏವ ನ ಜಾನಾಮಿ ಸ್ಮ | ನಿಮ್ಮ ವಿಳಾಸವೇ ಗೊತ್ತಿರಲಿಲ್ಲ. |
| ಮಹಾಜನಃ ಸಂವೃತ್ತಃ ಭವಾನ್ | ದೊಡ್ಡ ಮನುಷ್ಯನಾಗಿಬಿಟ್ಟೆ ನೀನು. |
| ಭವಾನ್ ಏವ ವಾ ? ದೂರತಃ ನ ಜ್ಞಾತವಮ್ | ನೀನೇನಾ ? ದೂರದಿಂದ ತಿಳೀಲೇ ಇಲ್ಲ. |
| ಹ್ಯಃ ಭವಂತಂ ಸ್ಮೃತವಾನ್ | ನಿನ್ನೆ ನಿನ್ನನ್ನ ನೆನಸ್ಕೊಂಡೆ. |
| ಕಿಂ ಅತ್ರ ಆಗಮನಮ್ ? | ಏನು ಇಲ್ಲಿಗೆ ಬಂದದ್ದು ? |
| ಅತ್ರೈವ ಕಿಂಚಿತ್ ಕಾರ್ಯಂ ಅಸ್ತಿ | ಇಲ್ಲೇ ಸ್ವಲ್ಪ ಕೆಲಸ ಇದೆ. |
| ತ್ವರಿತಂ ಕಾರ್ಯಂ ಆಸೀತ್, ಅತಃ ಆಗತವಾನ್ | ಅರ್ಜೆಂಟ್ ಕೆಲಸವಿತ್ತು, ಅದಕ್ಕೆ ಬಂದಿದ್ದೆ. |
| ಬಹುಕಾಲತಃ ಪ್ರತೀಕ್ಷಾಂ ಕರೋಮಿ | ತುಂಬ ಸಮಯದಿಂದ ಕಾಯ್ತಾ ಇದೀನಿ. |
| ಯಾನಂ ನ ಪ್ರಾಪ್ತಂ, ಅತ ಏವ ವಿಲಂಬಃ | ಬಸ್ ಸಿಗಲಿಲ್ಲ, ಅದಕ್ಕೇ ತಡ. |

| | |
|---|---|
| ಆಗಚ್ಛತು ಭೋಃ, ಮಮ ಗೃಹಂ ಗಚ್ಛಾಮ | ಬಾರಯ್ಯಾ, ನಮ್ಮ ಮನೆಗೆ ಹೋಗೋಣ. |
| ಇದಾನೀಂ ವಾ ? ಸಮಯಃ ನಾಸ್ತಿ ಭೋಃ | ಈಗಲಾ ? ಸಮಯ ಇಲ್ಲ ಕಣಯ್ಯಾ. |
| ಶ್ವಃ ಸಾಯಂ ಮಿಲಾಮಃ ವಾ ? | ನಾಳೆ ಸಂಜೆ ಸಿಗೋಣವಾ ? |
| ಅವಶ್ಯಂ ತತ್ರೈವ ಆಗಚ್ಛಾಮಿ | ಖಂಡಿತ ಅಲ್ಲಿಗೇ ಬರ್ತೀನಿ. |
| ಇದಾನೀಂ ಕುತ್ರ ಉದ್ಯೋಗಃ ? | ಈಗ ಎಲ್ಲಿ ಕೆಲಸ ? |
| ಯಂತ್ರಾಗಾರೇ ಉದ್ಯೋಗಃ | ಫ್ಯಾಕ್ಟರೀಲಿ ಕೆಲಸ. |
| ಏಕತ್ರ ಅಧ್ಯಾಪಕಃ ಅಸ್ಮಿ | ಒಂದುಕಡೆ ಅಧ್ಯಾಪಕನಾಗಿ ಇದೀನಿ. |
| ಇದಾನೀಂ ಕುತ್ರ ವಾಸಃ ? | ಈಗ ಎಲ್ಲಿ ವಾಸ ? |
| ಅಯಂ ಮಮ ಗೃಹಸಂಕೇತಃ | ಇದು ನನ್ನ ಮನೆ ವಿಳಾಸ. |
| ಯಾನಂ ಆಗತಂ, ಆಗಚ್ಛಾಮಿ | ಬಸ್ ಬಂತು, ಬರ್ತೀನಿ. |
| ಅಸ್ತು, ಪುನಃ ಪಶ್ಯಾಮಃ | ಆಗಲಿ, ಮತ್ತೆ ನೋಡೋಣ. |
| ಪುನಃ ಅಸ್ಮಾಕಂ ಮಿಲನಂ ಕದಾ ? | ಮತ್ತೆ ನಮ್ಮ ಭೇಟಿ ಎಂದು ? |
| ಪುನಃ ಕದಾ ಮಿಲತಿ ಭವಾನ್ ? | ನೀನು ಮತ್ತೆ ಯಾವಾಗ ಸಿಕ್ತೀ ? |
| ತದ್ದಿನೇ ಕಿಮರ್ಥಂ ಭವಾನ್ ನ ಆಗತವಾನ್ ? | ಅವತ್ತು ನೀನು ಯಾಕೆ ಬರಲಿಲ್ಲ ? |
| ವಯಂ ತದಾನೀಂ ಏವ ಆಗತವಂತಃ | ನಾವು ಆಗ್ಲೇ ಬಂದ್ಬಿಟ್ಟಿದ್ದೀವಿ. |
| ಭವತಃ ಸಮೀಪೇ ಸಂಭಾಷಣೀಯಂ ಅಸ್ತಿ | ನಿಮ್ಮ ಸಂಗಡ ಮಾತನಾಡಬೇಕಾಗಿದೆ, |
| ಭವಾನ್ ಅನ್ಯಥಾ ಗೃಹೀತವಾನ್ | ನೀವು ತಪ್ಪು ತಿಳಕೊಂಡಿದ್ದೀರಿ. |
| ಭವಂತಂ ಬಹು ಪ್ರತೀಕ್ಷಿತವಾನ್ | ನಿಮ್ಮನ್ನು ತುಂಬ ಕಾದೆ. |
| ಬಹು ಕಾಲಾತ್ ತಸ್ಯ ವಾರ್ತಾ ಏವ ನಾಸ್ತಿ | ತುಂಬಾ ದಿನದಿಂದ ಅವನ ಸುದ್ದಿಯೇ ಇಲ್ಲ. |

| | |
|---|---|
| ಭವತಃ ಪತ್ರಂ ಇದಾನೀಂ ಏವ ಲಬ್ಧಮ್ | ನಿಮ್ಮ ಪತ್ರ ಈಗ ತಾನೇ ಸಿಕ್ತು. |
| ತಾವದ್ದೂರಂ ಅಹಮಪಿ ಆಗಚ್ಛಾಮಿ, ಮಿಲಿತ್ವಾ ಗಚ್ಛಾಮಃ | ಅಷ್ಟು ದೂರ ನಾನೂ ಬರ್ತೀನಿ, ಒಟ್ಟಿಗೇ ಹೋಗೋಣ. |
| ತಿಷ್ಠತು ಭೋಃ, ಅರ್ಧಾರ್ಧಂ ಕಾಫೀ ಪಿಬಾಮ | ನಿಲ್ಲಯ್ಯ, 'ಬೈಟು' ಕಾಫಿ ಕುಡಿಯೋಣ. |
| ಅಸ್ತು, ಪಿಬಾಮ | ಆಗಲಿ, ಕುಡಿಯೋಣ. |
| ಸ್ಥಾತುಂ ಸಮಯಃ ನಾಸ್ತಿ | ಇರಲಿಕ್ಕೆ ಸಮಯವಿಲ್ಲ. |
| ಗಮನಸಮನಂತರಂ ಏವ ಪತ್ರಂ ಲಿಖತು | ಹೋದಕೂಡಲೇ ಪತ್ರ ಬರೆ. |
| ಪುನಃ ಏಕವಾರಂ ಪಶ್ಯಾಮಿ | ಮತ್ತೊಮ್ಮೆ ನೋಡುತ್ತೇನೆ. |
| ಯದಾ ಕದಾ ವಾ ಭವತು, ಅಹಂ ಸಿದ್ಧಃ | ಯಾವಾಗ ಬೇಕಾದರೂ ನಾನು ಸಿದ್ಧ. |
| ತಸ್ಮೈ ಮಮ ನಮಸ್ಕಾರಾನ್ ನಿವೇದಯತು | ಅವರಿಗೆ ನನ್ನ ನಮಸ್ಕಾರವನ್ನು ತಿಳಿಸು |
| ಕಿಂ ಭೋಃ, ಏವಂ ವದತಿ ? | ಏನಯ್ಯಾ, ಹೀಗೆ ಹೇಳ್ತೀ ? |
| ಕಿಂಚಿತ್ಕಾಲಂ ತಿಷ್ಠತು | ಸ್ವಲ್ಪ ಹೊತ್ತು ಇರು, |
| ಭವಾನ್ ಏವ ಪರಿಶೀಲಯತು | ನೀನೇ ಯೋಚಿಸಿ ನೋಡು. |
| ಅತ್ರ ಪತ್ರಾಲಯಃ ಕುತ್ರ ಅಸ್ತಿ ? | ಇಲ್ಲಿ ಅಂಚೆಕಛೇರಿ ಎಲ್ಲಿದೆ ? |
| ಕಿಯದ್‌ದೂರೇ ಅಸ್ತಿ ? | ಎಷ್ಟು ದೂರ ಇದೆ ? |
| ವಿತ್ತಕೋಷಃ ಕಿಯದ್‌ದೂರೇ ಅಸ್ತಿ ? | ಬ್ಯಾಂಕ್ ಎಷ್ಟು ದೂರ ಇದೆ ? |
| ಕಿಮರ್ಥಂ ಏವಂ ತ್ವರಾ ? | ಯಾಕಿಷ್ಟು ಗಡಿಬಿಡಿ ? |
| ಇತೋಽಪಿ ಸಮಯಃ ಅಸ್ತಿ ಕಿಲ ? | ಇನ್ನೂ ಸಮಯ ಇದೆ ತಾನೇ ? |
| ಸರ್ವಸ್ಯ ಅಪಿ ಮಿತಿಃ ಭವೇತ್ | ಯಾವುದಕ್ಕೂ ಮಿತಿಯಿರಬೇಕು. |

| | |
|---|---|
| ಕಿಯದಿತಿ ದಾತುಂ ಶಕ್ಯಮ್ ? | ಎಷ್ಟು ಅಂತ ಕೊಡಲಿಕ್ಕೆ ಸಾಧ್ಯ ? |
| ಕಸ್ಮಿನ್ ಸಮಯೇ ಪ್ರತೀಕ್ಷಣೀಯಮ್ ? | ಎಷ್ಟು ಹೊತ್ತಿಗೆ ಎದುರುನೋಡುತ್ತಿರಬೇಕು ? |
| ಗೃಹೇ ಉಪವಿಶ್ಯ ಕಿಂ ಕರೋತಿ ? | ಮನೆಯಲ್ಲಿ ಕುಳಿತು ಏನು ಮಾಡ್ತೀಯಾ ? |
| ಭವತಃ ಪರಿಚಯಃ ಏವ ನ ಲಬ್ಧಃ | ನಿಮ್ಮ ಗುರುತೇ ಸಿಗಲಿಲ್ಲ. |
| ಕಿಂ ಭೋಃ, ಬಹು ಕೃಶಃ ಜಾತಃ ? | ಏನಯ್ಯಾ, ತುಂಬಾ ಬಡವಾಗಿದ್ದೀ ? |
| ಅವಶ್ಯಂ ಮಮ ಗೃಹಂ ಆಗಂತವ್ಯಮ್ | ಖಂಡಿತ ನಮ್ಮ ಮನೆಗೆ ಬರಬೇಕು. |
| ಸರ್ವತ್ರ ದರ್ವೀಂ ಚಾಲಯತಿ | ಎಲ್ಲಾದರಲ್ಲೂ ಬಾಯಿ ಹಾಕ್ತಾನೆ. |
| ಯಥಾ ಭವಾನ್ ಇಚ್ಛತಿ | ನೀನು ಹೇಳಿದ ಹಾಗೆ. |
| ಪರಿಹಾಸಾಯ ಉಕ್ತವಾನ್ ಭೋಃ | ವಿನೋದಕ್ಕಾಗಿ ಹೇಳಿದೆ ಕಣೋ. |
| ಏಷಃ ಭವತಃ ಅಪರಾಧಃ ನ | ಇದು ನಿನ್ನ ತಪ್ಪಲ್ಲ. |
| ನೈವ, ಚಿಂತಾ ನಾಸ್ತಿ | ಇಲ್ಲ, ತೊಂದರೆಯಿಲ್ಲ. |
| ವಯಮ್ ಇದಾನೀಂ ಅನ್ಯದ್‌ಗೃಹೇ ಸ್ಮಃ | ನಾವೀಗ ಬೇರೆ ಮನೆಯಲ್ಲಿ ಇದ್ದೇವೆ. (ಮನೆ ಬದಲಾಯಿಸಿದ್ದೇವೆ) |
| ಭವಾನ್ ಮಮ ಅಪೇಕ್ಷಯಾ ಜ್ಯೇಷ್ಠಃ ವಾ ? | ನೀವು ನನಗಿಂತ ದೊಡ್ಡವರಾ ? |
| ಓಹೋ ! ಮಮ ಅಪೇಕ್ಷಯಾ ಕನಿಷ್ಠಃ ವಾ ? | ಓಹೋ ! ನನಗಿಂತ ಚಿಕ್ಕವರಾ ? |
| ಭವಾನ್ ವಿವಾಹಿತಃ ವಾ ? | ನೀವು ವಿವಾಹಿತರಾ ? |
| ನೈವ, ಇದಾನೀಂ ಅಪಿ ಏಕಾಕೀ | ಇಲ್ಲ, ಇನ್ನೂ ಒಬ್ಬಂಟಿಗನೇ, |
| ಭವತಃ ಪಿತಾ ಕುತ್ರ ಕಾರ್ಯಂ ಕರೋತಿ ? | ನಿಮ್ಮ ತಂದೆ ಎಲ್ಲಿ ಕೆಲಸ ಮಾಡುತ್ತಾರೆ ? |

| | |
|---|---|
| *ಸಃ ವರ್ಷದ್ವಯಾತ್ ಪೂರ್ವಮೇವ ನಿವೃತ್ತಃ | ಅವರು ಎರಡು ವರ್ಷಕ್ಕೆ ಹಿಂದೆಯೇ ನಿವೃತ್ತರು. |
| ಸಃ ವೃದ್ಧಃ ಇವ ಭಾತಿ | ಅವರು ಮುದುಕರಂತೆ ಕಾಣುತ್ತಾರೆ. |
| ಸರ್ವೇ ಸಹೈವ ವಸಂತಿ ವಾ ? | ಎಲ್ಲಾ ಒಟ್ಟಾಗಿದೀರಾ ? |
| ನೈವ, ಸರ್ವೇ ವಿಭಕ್ತಾಃ | ಇಲ್ಲ, ಎಲ್ಲಾ ಪಾಲಾಗಿದೀವಿ. |
| ಭವತಃ ವಯಃ ಕಿಯತ್ ? | ನಿಮ್ಮ ವಯಸ್ಸೆಷ್ಟು ? |
| ಭವಂತಃ ಕತಿ ಸಹೋದರಾಃ ? | ನೀವು ಎಷ್ಟು ಜನ ಅಣ್ಣತಮ್ಮಂದಿರು ? |
| ವಯಂ ಆಹತ್ಯ ಅಷ್ಟ ಜನಾಃ | ನಾವು ಒಟ್ಟು ಎಂಟು ಜನ. |
| ತೇಷು ಭವಾನ್ ಕತಮಃ ? | ಅವರಲ್ಲಿ ನೀವು ಎಷ್ಟನೆಯವರು ? |
| ಭವಾನ್ ಏವ ಜ್ಯೇಷ್ಠಃ ವಾ ? | ನೀವೇ ಹಿರಿಯವರಾ ? |
| ಮಮ ಅಗ್ರಜಃ ಪೃಥಕ್ ವಸತಿ | ನನ್ನ ಅಣ್ಣ ಬೇರೆ ಇದಾನೆ. |
| ಸಃ ತಾವತ್ ಬಾಲಃ | ಅವನಿನ್ನೂ ಹುಡುಗ. |
| ಸಃ ಕಿಂ ಜಾನಾತಿ ? | ಅವನಿಗೇನು ಗೊತ್ತು ? |
| ಭವತಃ ಅನುಜಾಯಾಃ ಕತಿ ವರ್ಷಾಣಿ ? | ನಿಮ್ಮ ತಂಗಿಗೆ ಎಷ್ಟು ವರ್ಷ ? |
| ಭವಾನ್ ನ ವಾ ದದಾತು, ನ ವಾ ಸ್ವೀಕರೋತು | ನೀನು ಕೊಡಲೂ ಬೇಡ, ತೆಗೆದುಕೊಳ್ಳಲೂ ಬೇಡ. |
| ಅನ್ಯಂ ಕಮಪಿ ಮಾ ಪೃಚ್ಛತು | ಬೇರೆ ಯಾರನ್ನೂ ಕೇಳಬೇಡ. |
| ಸಃ ಬಹು ವದತಿ | ಅವನು ತುಂಬಾ ಮಾತಾಡ್ತಾನೆ. |
| ತರ್ಹಿ ಸರ್ವಂ ದಾಯಿತ್ವಂ <u>ಭವತಃ ಏವ</u> | ಹಾಗಾದರೆ ಎಲ್ಲ ಭಾರ ನಿಮ್ಮ ಮೇಲೆಯೇ. |
| ಸರ್ವತ್ರ ಅಗ್ರೇ ಸರತಿ | ಎಲ್ಲೆಡೆಯಲ್ಲಿಯೂ ಮುಂದೆ ಮುಂದೆ ಬರುತ್ತಾನೆ. |

* ಇಂತಹ ಸಂದರ್ಭದಲ್ಲಿ ಸಂಸ್ಕೃತದಲ್ಲಿ ಏಕವಚನದಿಂದ ಹೇಳುವುದೇ ರೂಢಿ.

| | |
|---|---|
| ಭವಂತಂ ಗೃಹೇ ಏವ ಪಶ್ಯಾಮಿ | ನಿಮ್ಮನ್ನು ಮನೆಯಲ್ಲೇ ನೋಡ್ತೀನಿ. |
| ಸಃ ಬಹು ಸಂಪ್ರದಾಯಪರಃ | ಅವನು ತುಂಬಾ ಮಡಿವಂತ, |
| ಯಾವದಹಂ ಪ್ರತ್ಯಾಗಚ್ಛಾಮಿ ತಾವತ್ ಪ್ರತೀಕ್ಷಾಂ ಕರೋತು | ನಾನು ಬರುವವರೆಗೂ ಕಾಯುತ್ತಿರು, |
| ದ್ವಯೋಃ ಏಕಃ ಆಗಚ್ಛತು | ಇಬ್ಬರಲ್ಲಿ ಒಬ್ಬ ಬನ್ನಿ. |
| ತಸ್ಮೈ ವಿಷಯಃ ನಿವೇದಿತಃ ವಾ ? | ಅವನಿಗೆ ವಿಷಯ ತಿಳಿಸಿದ್ದೀರಾ ? |
| ಸಃ ತಸ್ಯ ಅತ್ಯಂತಂ ಪ್ರೀತಿಪಾತ್ರಮ್ | ಅವನು ಅವರಿಗೆ ತುಂಬ ಬೇಕಾದವನು. |
| ಭವತಾ ಏವಂ ನ ಕರ್ತವ್ಯಂ | ನೀವು ಹೀಗೆ ಮಾಡಬಾರದು. |
| ಯದಿ ಸಃ ಸ್ಯಾತ್ ...... | ಅವನು ಇದ್ದಿದ್ದರೆ ...... |
| ಅವಶ್ಯಂ ಆಗಂತವ್ಯಂ, ನ ವಿಸ್ಮರ್ತವ್ಯಂ | ಖಂಡಿತ ಬರಬೇಕು, ಮರೆಯಬಾರದು. |
| ಕಿಯತ್ಕಾಲಂ ತಿಷ್ಠತಿ ? | ಎಷ್ಟೊತ್ತಿನವರೆಗೆ ಇರುತ್ತೀರಾ ? |
| ಏಷಾ ವಾರ್ತಾ ಮಮ ಕರ್ಣಂ ಅಪಿ ಆಗತಾ | ಈ ಸುದ್ದಿ ನನ್ನ ಕಿವಿಗೂ ಬಿದ್ದಿತ್ತು, |
| ಅಹಂ ಕಿಮರ್ಥಂ ಅಸತ್ಯಂ ವದಾಮಿ? | ನಾನ್ಯಾಕೆ ಸುಳ್ಳು ಹೇಳಲಿ ? |
| ಭವಾನ್ ಅಪಿ ಏವಂ ವದತಿ ವಾ ? | ನೀನೂ ಹೀಗೆ ಹೇಳ್ತೀಯಾ ? |
| ಭವಾನ್ ಏವಂ ಕರ್ತುಂ ಅರ್ಹತಿ ವಾ ? | ನೀನು ಹೀಗೆ ಮಾಡಬಹುದಾ ? |
| ಭವಾನ್ ಗಚ್ಛತು, ಮಮ ಕಿಂಚಿತ್ ಕಾರ್ಯಂ ಅಸ್ತಿ | ನೀನು ಹೋಗು, ನನಗೆ ಸ್ವಲ್ಪ ಕೆಲಸವಿದೆ. |
| ಭವಾನ್ ವೃಥಾ ಚಿಂತಯತಿ | ನೀನು ಸುಮ್ಮನೆ ಚಿಂತೆ ಮಾಡುತ್ತಿ. |
| ದೈವೇಚ್ಛಾ ತಥಾ ಆಸೀತ್, ಕಿಂ ಕುರ್ಮಃ ? | ದೈವೇಚ್ಛೆ ಹಾಗಿತ್ತು, ಏನು ಮಾಡೋಣ ? |
| ಅಹಂ ಅನ್ಯತ್ ಉಕ್ತವಾನ್, ಭವಾನ್ ಅನ್ಯತ್ ಗೃಹೀತವಾನ್ | ನಾನೊಂದು ಹೇಳಿದೆ, ನೀನು ಬೇರೊಂದು ತಿಳಿದುಕೊಂಡೆ. |

| | |
|---|---|
| ಏತಾವದ್ ಅನೃತಂ ವದತೀತಿ ನ ಜ್ಞಾತವಾನ್ ಆಸಮ್ | ಇಷ್ಟು ಸುಳ್ಳು ಹೇಳ್ತಾನೆ ಅಂತ ತಿಳಿದುಕೊಂಡಿರಲಿಲ್ಲ. |
| ಪ್ರಮಾದಾತ್ ಸಂವೃತ್ತಂ, ನ ತು ಬುದ್ಧ್ಯಾ | ಅಕಸ್ಮಾತ್ ಆಗ್ಹೋಯ್ತು, ಬೇಕಂತ ಮಾಡಿದ್ದಲ್ಲ |
| ಏಷಃ ಏಕಃ ಶನಿಃ | ಇವನೊಬ್ಬ ಶನಿ (ಪೀಡೆ). |
| ಭವದುಕ್ತಂ ಸರ್ವಂ ಅಪಿ ಅಂಗೀಕರ್ತುಂ ನ ಶಕ್ಯಮ್ | ನೀನು ಹೇಳಿದ್ದನ್ನೆಲ್ಲಾ ಒಪ್ಪಿಕೊಳ್ಳಲಿಕ್ಕೆ ಆಗುವುದಿಲ್ಲ. |
| ಅಹಂ ಗಂತುಂ ನ ಶಕ್ನೋಮಿ | ನನಗೆ ಹೋಗಲಿಕ್ಕೆ ಆಗುವುದಿಲ್ಲ. |
| ವಿಷಯಸ್ಯ ವರ್ಧನಂ ಮಾಸ್ತು | ವಿಷಯ ಬೆಳೆಸಬೇಡ. |
| ಸರ್ವೇ ಅಪಿ ಪಲಾಯನಶೀಲಾಃ | ಎಲ್ಲರೂ ಪಲಾಯನವಾದಿಗಳು. |
| ಅಸಂಬದ್ಧಂ ಮಾ ಪ್ರಲಪತು | ಹುಚ್ಚುಚ್ಚಾಗಿ ಹರಟಬೇಡ. |
| ಸರ್ವಸ್ಯಾಪಿ ಭವಾನ್ ಏವ ಮೂಲಮ್ | ಎಲ್ಲದಕ್ಕೂ ನೀನೇ ಮೂಲ. |
| ಗತ್ವಾ ಗತ್ವಾ ತಸ್ಯ ಜಾಲೇ ಪತಿತವಾನ್ | ಹೋಗಿ ಹೋಗಿ ಅವನ ಬಲೆಯಲ್ಲಿ ಬಿದ್ದ. |
| ಅಸ್ಮಾಕಂ ಮಿಲನಾನಂತರಂ ಬಹುಕಾಲಃ ಅತೀತಃ | ನಾವು ಭೇಟಿಯಾಗಿ ಬಹಳ ಕಾಲ ಆಯಿತು. |
| ಇದಾನೀಂ ಆಗಂತುಂ ನ ಶಕ್ಯತೇ | ಈಗ ಬರಲಿಕ್ಕೆ ಆಗೋಲ್ಲ. |
| ಭವಾನ್ ಅಪಿ ವಿಶ್ವಸಿತಿ ? | ನೀನೂ ಒಪ್ಕೋತೀಯಾ ? |
| ಭವಾನ್ ಅಪಿ ವಿಶ್ವಸಿತವಾನ್ ? | ನೀನೂ ನಂಬಿ ಬಿಟ್ಯಾ ? |
| ಸಃ ವಿಶ್ವಾಸಯೋಗ್ಯಃ ವಾ ? | ಅವನನ್ನು ನಂಬಬಹುದಾ ? |
| ಕಿಂಚಿತ್ ಸಾಹಾಯ್ಯಂ ಕರೋತಿ ವಾ? | ಸ್ವಲ್ಪ ಸಹಾಯ ಮಾಡ್ತೀರಾ ? |
| ಸಮಯಃ ಕಥಂ ಅತಿಶೀಘ್ರಂ ಗತಃ ! | ವೇಳೆ ಹೇಗೆ ಕಳೆದುಹೋಯ್ತು ! |
| ಸಾಕ್ಷಾತ್ ಸಮಯೇ ಆಗತವಾನ್ | ಸರಿಯಾಗಿ ಸಮಯಕ್ಕೇ ಬಂದೆ. |

| | |
|---|---|
| ಏಕನಿಮೇಷಂ ವಿಲಂಬಃ ಚೇತ್ ಅಹಂ ಗತಃ ಸ್ಯಾಮ್ | ಒಂದು ನಿಮಿಷ ತಡವಾಗಿದ್ದಿದ್ದರೆ ನಾನು ಹೋಗಿರುತ್ತಿದ್ದೆ. |
| ಅಹಂ ಅಪಿ ಭವತಾ ಸಹ ಆಗಚ್ಛಾಮಿ ವಾ ? | ನಾನೂ ನಿನ್ನ ಜೊತೆ ಬರಲೇ ? |
| ಕಿಂಚಿತ್ ಕಾಲಂ ದ್ವಿಚಕ್ರಿಕಾಂ ದದಾತಿ ವಾ ? | ಸ್ವಲ್ಪಕಾಲ ಸೈಕಲ್ ಕೊಟ್ಟಿರ್ತೀಯಾ ? |
| ಇದಾನೀಂ ಮಯಾ ಅಪಿ ಅನ್ಯತ್ರ ಗಂತವ್ಯಮ್ | ಈಗ ನಂಗೂ ಬೇರೆ ಕಡೆ ಹೋಗ್ಬೇಕು. |
| ಭವಾನ್ ಸ್ವಕಾರ್ಯಂ ಪಶ್ಯತು | ನೀನು ನಿನ್ನ ಕೆಲಸ ನೋಡಿಕೋ. |
| ಶೀಘ್ರಂ ಪ್ರತ್ಯಾಗಚ್ಛಾಮಿ | ಬೇಗ ಬಂದು ಬಿಡುತ್ತೀನಿ. |
| ಆವಶ್ಯಕಂ ಚೇತ್ ಶ್ವಃ ಆನಯಾಮಿ | ಬೇಕೂ ಅಂತಾಂದ್ರೆ ನಾಳೆ ತರ್ತೀನಿ. |
| 'ಮಾಸ್ತು' ಇತ್ಯುಕ್ತೇ ಅಪಿ ನ ಶೃಣೋತಿ | ಬೇಡಾ ಅಂದರೂ ಕೇಳೋಲ್ಲ. |

## ೬. ಪ್ರಯಾಣಮ್

| | |
|---|---|
| ಚಿಟಿಕಾ ಕುತ್ರ ಲಭ್ಯತೇ ? | ಟಿಕೆಟ್ಟು ಎಲ್ಲಿ ಸಿಗುತ್ತೆ? |
| ಶೀಘ್ರಂ ಆಗಚ್ಛತು. ಯಾನಂ ಗಚ್ಛತಿ | ಬೇಗ ಬಾ. ಬಸ್ಸು ಹೊರಟ್ಹೋಗುತ್ತೆ. |
| ಇದಾನೀಂ ಏವ ಏಕಂ ಯಾನಂ ಗತಮ್ | ಈಗ ತಾನೇ ಒಂದು ಬಸ್ಸು ಹೋಯ್ತು. |
| ಅಹಂ ಪಾರ್ಶ್ವೇ ಉಪವಿಶಾಮಿ ಭೋಃ | ನಾನು ಪಕ್ಕದಲ್ಲಿ ಕುಳಿತುಕೋತೀನಿ ಕಣಯ್ಯ. |
| ಕಿಂಚಿತ್ ಸಮಂಜನಂ ಕೃತ್ವಾ ಉಪವಿಶಾಮ | ಸ್ವಲ್ಪ ಅನುಸರಿಸಿಕೊಂಡು (Adjust) ಕುಳಿತುಕೊಳ್ಳೋಣ. |
| ಮಹತೀ ಅನುಪಂಕ್ತಿಃ | ಉಽಽದ್ದ ಕ್ಯೂ. |
| ಮಹಾನ್ ಜನಸಮ್ಮರ್ದಃ | ತುಂಬಾ ಜನಸಂದಣಿ. |
| ಪರೀವರ್ತಂ ದದಾತು | ಚಿಲ್ಲರೆ ಕೊಡಿ. |
| ಅಗ್ರೇ ಸರತು | ಮುಂದೆ ಹೋಗಿ. |
| ಕದಾ ವಾ ನಿರ್ಗಚ್ಛತಿ ? | ಯಾವಾಗ ಹೊರಡುತ್ತೆ ? |
| ಶೀಘ್ರಂ ಅವತರತು | ಬೇಗ ಇಳಿಯಿರಿ. |
| ಅಗ್ರಿಮಂ ನಿಃಸ್ಥಾನಂ ಅಸ್ಮಾಕಂ ವಾ ? | ಮುಂದಿನ ನಿಲ್ದಾಣ ನಮ್ಮದಾ ? |
| ಮಲ್ಲೇಶ್ವರಯಾನಸ್ಯ ಕಾ ಸಂಖ್ಯಾ ? | ಮಲ್ಲೇಶ್ವರ ಬಸ್ಸಿನ ಸಂಖ್ಯೆ ಎಷ್ಟು ? |
| ಕಿಂಸಂಖ್ಯಾಕಂ ಯಾನಂ ಜಯನಗರಂ ಗಚ್ಛತಿ ? | ಎಷ್ಟನೇ ನಂಬರಿನ ಬಸ್ಸು ಜಯನಗರಕ್ಕೆ ಹೋಗುತ್ತೆ ? |
| ಫಲಕಮಪಿ ನಾಸ್ತಿ, ಕಿಮಪಿ ನಾಸ್ತಿ | ಬೋರ್ಡೂ ಇಲ್ಲ, ಏನೂ ಇಲ್ಲ. |
| ಅಯೇ ! ಪಾದಪಥೇ ಆಗಚ್ಛತು | ಏಯ್, ಫುಟ್‌ಪಾತಿನಲ್ಲಿ ಬಾರಯ್ಯ. |

| | |
|---|---|
| ಮಲ್ಲೇಶ್ವರಂ ಗಂತುಂ ಕಃ ಮಾರ್ಗಃ ? | ಮಲ್ಲೇಶ್ವರಕ್ಕೆ ಹೋಗಲು ಯಾವ ದಾರಿ ? |
| ಬಹುದೂರೇ ಅಸ್ತಿ ವಾ ? | ತುಂಬ ದೂರ ಆಗುತ್ತಾ ? |
| <u>ಏತಂ ಸಂಕೇತಂ ಜಾನಾತಿ ವಾ ?</u> | ಈ ವಿಳಾಸ ಎಲ್ಲಾಗುತ್ತ ಗೊತ್ತಾ ? |
| ಇತಃ ತತ್ರ ಗಂತುಂ ಕೇವಲಂ ದಶ ನಿಮೇಷಾಃ | ಅಲ್ಲಿಗೆ ಹೋಗಲು ಬರೀ ಹತ್ತು ನಿಮಿಷ ಸಾಕು. |
| ಯಾನಂ ನ ಲಬ್ಧಮ್ | ಬಸ್ಸು ಸಿಗಲಿಲ್ಲ. |
| ಯಾನಂ ನಿರ್ಗಂತುಂ ಇತೋಽಪಿ ಅರ್ಧಘಂಟಾ ಅಸ್ತಿ | ಬಸ್ಸು ಹೊರಡಲು ಇನ್ನೂ ಅರ್ಧ ಘಂಟೆ ಇದೆ. |
| ಯಾನಂ ದಶವಾದನೇ ಆಗಚ್ಛತಿ | ಹತ್ತು ಘಂಟೆಗೆ ಬಸ್ಸು ಬರುತ್ತೆ. |
| ಪಂಚವಾದನೇ ಏಕಂ ಯಾನಂ ಅಸ್ತಿ | ಐದು ಘಂಟೆಗೆ ಒಂದು ಬಸ್ಸು ಇದೆ. |
| ಯಾನಂ ತದಾನೀಂ ಏವ ಆಗತ್ಯ ಸ್ಥಿತಮ್ | ಬಸ್ಸು ಆಗಲೇ ಬಂದು ನಿಂತಿದೆ. |
| ಆರಕ್ಷಣಂ ಅಪಿ ನಾಸ್ತಿ, ಕಿಮಪಿ ನಾಸ್ತಿ; ಯಥಾಕಥಂಚಿತ್ ಗಂತವ್ಯಮ್ | ಕಾದಿರಿಸಿದಸ್ಥಳವೂ (Reservation) ಇಲ್ಲ, ಏನೂ ಇಲ್ಲ; ಹೇಗಾದರೂ ಹೋಗಬೇಕು. |
| ಏವಮೇವ ಅಗ್ರೇ ಗಚ್ಛತು | ಹೀಗೇ ಮುಂದೆ ಹೋಗಿ. |
| ಅತ್ರೈವ ಕುತ್ರಾಪಿ ಸ್ಯಾತ್, ಅನ್ವೇಷಣಂ ಕುರ್ಮಃ | ಇಲ್ಲೇ ಎಲ್ಲಾದರೂ ಇದ್ದೀತು, ಹುಡುಕೋಣ. |
| ತತ್ರೈವ ಅಸ್ತಿ / ತತ್ರೈವ ಸ್ಯಾತ್ | ಅಲ್ಲೇ ಇದೆ. / ಅಲ್ಲೇ ಇದ್ದೀತು. |
| ಅಹಂ ನ ಜಾನಾಮಿ, ಅನ್ಯಂ ಪೃಚ್ಛತು | ನಂಗೆ ಗೊತ್ತಿಲ್ಲ, ಬೇರೆಯವರನ್ನು ಕೇಳಿ. |
| ಶೀಘ್ರಂ ನ ಗಚ್ಛತಿ ಚೇತ್ ಯಾನಂ ನ ಲಭ್ಯತೇ | ಬೇಗ ಹೋಗದಿದ್ದರೆ ಬಸ್ಸು ಸಿಗೋಲ್ಲ. |
| ಏಷಃ ಮಾರ್ಗಃ ಕುತ್ರ ಗಚ್ಛತಿ ? | ಈ ದಾರಿ ಎಲ್ಲಿಗೆ ಹೋಗುತ್ತ ? |

| | |
|---|---|
| ಭವಾನ್ ಆರಕ್ಷಣಂ ಕೃತವಾನ್ ವಾ ? | ನೀನು ರಿಸರ್ವೇಷನ್ ಮಾಡಿದ್ದೀಯಾ ? |
| ಸರ್ವಂ ಸ್ವೀಕೃತವಾನ್ ಕಿಲ? | ಎಲ್ಲಾ ತಗೊಂಡೆ ತಾನೆ ? |
| ಸರ್ವಬಂಧಕಂ ಸ್ವೀಕರೋತು | ಹೋಲ್ಡಾಲ್ ತೆಗೆದುಕೋ. |

| | |
|---|---|
| ಸ್ಯೂತಮ್–ಬ್ಯಾಗನ್ನು | ಯಾನಪೇಟಿಕಾಮ್– ಸೂಟ್‌ಕೇಸನ್ನು |
| ಏತತ್–ಇದನ್ನು | |
| ಚಿಟಿಕಾಮ್–ಟಿಕೆಟ್ಟನ್ನು | ವನಿತಾಸ್ಯೂತಮ್- ವೆನಿಟಿಬ್ಯಾಗನ್ನು |
| ಯಾನಸ್ಯೂತಮ್– ಏರ್‌ಬ್ಯಾಗನ್ನು | |

| | |
|---|---|
| ಧನವಿಷಯೇ ಜಾಗ್ರತ | ದುಡ್ಡು ಜೋಪಾನ. |
| ತತಃ ಆಗಂತುಂ ಏತಾವಾನ್ ವಿಲಂಬಃ ವಾ ? | ಅಲ್ಲಿಂದ ಬರೋಕ್ಕೆ ಇಷ್ಟು ವಿಳಂಬವಾ ? |
| ಏಕಂ ಅಪಿ ಯಾನಂ ನ ಆಗತಮ್ | ಒಂದೂ ಬಸ್ಸೂ ಬಂದಿಲ್ಲ. |
| ಷಷ್ಟಿಸಂಖ್ಯಾಕಂ ಯಾನಂ ಗತಂ ವಾ ? | ೬೦ ನೇ ನಂಬರಿನ ಬಸ್ಸು ಹೋಯ್ತಾ ? |
| ಅಹಂ ಇದಾನೀಂ ಏವ ಆಗತವಾನ್ | ನಾನು ಈಗ ತಾನೆ ಬಂದೆ. |
| ಕೀದೃಶಃ ಮಾರ್ಗಃ ಏಷಃ ! | ಏನು ರಸ್ತೆಯೋ ! |

# ೭. 'ಪ್ರವಾಸಾತ್ ಪ್ರತಿನಿವರ್ತನಮ್'

| ಕದಾ ಆಗತವಾನ್ ? | ಯಾವಾಗ ಬಂದಿರಿ ? |
|---|---|
| ಅದ್ಯ ಪ್ರಾತಃ ಆಗತವಾನ್ ವಾ ? | ಇವತ್ತು ಬೆಳಿಗ್ಗೆ ಬಂದಿರಾ ? |
| ಕಥಂ ಆಸೀತ್ ಪ್ರವಾಸಃ ? | ಹೇಗಿತ್ತು ಪ್ರವಾಸ ? |
| ಯಾನಸೌಕರ್ಯಂ ಕಥಂ ಆಸೀತ್ ? | ಯಾನ ಸೌಕರ್ಯವೆಲ್ಲ ಹೇಗಿತ್ತು ? |
| ಕತಿ ದಿನಾನಿ ಪ್ರವಾಸಃ ? | ಎಷ್ಟು ದಿನಗಳ ಪ್ರವಾಸ ? |
| ಏಕಃ ಏವ ಗತವಾನ್ ವಾ ? | ಒಬ್ಬರೇ ಹೋಗಿದ್ದಿರಾ ? |
| ಏಕಾಕೀ ಕಥಮ್ ? <u>ಸಪರಿವಾರಃ ಗತವಾನ್</u> | ಒಬ್ಬನೆಲ್ಲಿ ? ಕುಟುಂಬ ಸಮೇತವಾಗಿ ಹೋಗಿದ್ದೆ. |
| ದಿನತ್ರಯಂ ತತ್ರ ಸ್ಥಿತವಾನ್ | ಮೂರು ದಿನ ಅಲ್ಲಿದ್ದೆ. |
| ಮಾರ್ಗಮಧ್ಯೇ ಅಪಘಾತಃ ಸಂಜಾತಃ | ದಾರೀಲಿ ಅಪಘಾತ ಆಗೋಯ್ತು. |
| ವಿಶೇಷತಯಾ <u>ಕೋಽಪಿ ನ ವ್ರಣಿತಃ</u> | ವಿಶೇಷವಾಗಿ ಯಾರಿಗೂ ಪೆಟ್ಟಾಗಲಿಲ್ಲ. |
| ವಸ್ತೂನಿ ಏತಾವಂತಿ ಏವ ವಾ ? | ಲಗ್ಗೇಜು ಇಷ್ಟೇನೇನಾ ? |
| ಬಹುಧಾ ಶ್ರಾಂತಃ ಅಸ್ಮಿ ಭೋಃ | ತುಂಬಾ ಆಯಾಸ ಕಣಯ್ಯ. |
| ತ್ರಿಚಕ್ರಿಕಾ ಕಿಮರ್ಥಮ್ ? | ರಿಕ್ಷಾ ಯಾಕೆ ? |
| ಲೋಕಯಾನೇನ ಗಚ್ಛಾವು | ಬಸ್ಸಲ್ಲಿ ಹೊರಟು ಹೋಗೋಣ. |

| ಲೋಕಯಾನೇನ– ಬಸ್ಸಿನಲ್ಲಿ (ಬಸ್ಸಿನಿಂದ) | ಸಾಮಿಸುಖಯಾನೇನ– ಸೆಮಿಲಕ್ಸುರಿಯಲ್ಲಿ |
|---|---|
| ಸುಖಯಾನೇನ– ಲಕ್ಸುರಿ ಬಸ್ಸಿನಲ್ಲಿ | ತ್ರಿಚಕ್ರಿಕಯಾ–ರಿಕ್ಷಾದಲ್ಲಿ |
| | ಪದ್ಭ್ಯಾಮ್–ನಡೆದುಕೊಂಡು |
| | ಸಂಲಪಂತಃ–ಮಾತನಾಡುತ್ತ |

| | |
|---|---|
| ಕಃ ಪ್ರತೀಕ್ಷತೇ ಭೋಃ ? | ಯಾರು ಕಾಯುತ್ತಾರಯ್ಯ ? |
| ತ್ರಿಚಕ್ರಿಕಯಾ ಏವ ಗಚ್ಛಾಮ | ರಿಕ್ಷಾದಲ್ಲಿ ಹೋಗ್ಬಿಡೋಣ. |
| ಕಿಮರ್ಥಂ ವೃಥಾ ವ್ಯಯಃ ಇತಿ | ಯಾಕೆ ಸುಮ್ನೇ ಖರ್ಚು ಅಂತ. |
| ಬಹುಕಾಲತಃ ಪ್ರತೀಕ್ಷಾಂ ಕರೋಮಿ | ತುಂಬ ಕಾಲದಿಂದ ಕಾಯ್ತಾಇದೀನಿ. |
| ಕದಾ ಪ್ರಸ್ಥಿತಃ ? | ಯಾವಾಗ ಹೊರಟೆ ? |
| ಕಾಶೀಂ ರಾಮೇಶ್ವರಂ ಸರ್ವಂ ದೃಷ್ಟವಾನ್ ವಾ ? | ಕಾಶಿ ರಾಮೇಶ್ವರ ಎಲ್ಲಾ ನೋಡಿ ಬಂದ್ಯಾ ? |
| ಕಿಯತ್ ಸುಂದರಂ, ಜಾನಾತಿ ವಾ? | ಎಷ್ಟು ಚೆನ್ನಾಗಿದೆ ಗೊತ್ತಾ ? |
| ಮಹದ್ ಅದ್ಭುತಮ್ ! | ಅದ್ಭುತವಾಗಿದೆ ! |
| ಉಪಾಹಾರಮಂದಿರೇ ಸ್ಥಿತವಾನ್ ವಾ ? | ಹೊಟೆಲ್ಲಿನಲ್ಲಿ ಇಳ್ಕೊಂಡಿದ್ದಿರಾ ? |
| ಏಕಸ್ಯ ಭೋಜನಸ್ಯ ದಶ ರೂಪ್ಯಕಾಣಿ ! | ಒಂದು ಊಟಕ್ಕೆ ಹತ್ತು ರೂಪಾಯಿ ! |
| ಅವಶ್ಯಂ ದರ್ಶನೀಯಂ ತತ್ | ಖಂಡಿತ ನೋಡಬೇಕಾದದ್ದು ಅದು. |
| ಅಹೋ ಶ್ರಾಂತಃ ! | ಸಾಕಪ್ಪಾ ಸಾಕು ! |
| 'ಪಂಡಾ'ಜನಾನಾಂ ಮಹತೀ ಪೀಡಾ | ಪಂಡಾಗಳ ಹಾವಳಿ. |
| ದೇವದರ್ಶನಂ ಶೀಘ್ರಂ ಜಾತಮ್ | ದೇವದರ್ಶನ ಬೇಗ ಆಯ್ತು. |

| | |
|---|---|
| ಅತ್ರೈವ ಮಹಾವಿದ್ಯಾಲಯೇ ಪಠಾಮಿ ! | ಇಲ್ಲೇ ಕಾಲೇಜಿನಲ್ಲಿ ಓದ್ತಿದ್ದೀನಿ. |
| ಸಿದ್ಧತಾ ಕಥಂ ಅಸ್ತಿ? | ಸಿದ್ಧತೆ ಹೇಗೆ ಸಾಗಿದೆ ? |
| ಪಾಠ್ಯಭಾಗಃ ಏವ ನ ಸಮಾಪ್ತಃ | Portionನ್ನೇ ಮುಗಿದಿಲ್ಲ. |
| ಗಣಿತಶ್ರವಣಮಾತ್ರೇಣ ಮಮ ಶಿರೋವೇದನಾ | ಗಣಿತ ಅಂದ್ರೆ ನನಗೆ ತಲೆನೋವು. |
| ಕಿಂ ಭೋಃ! ಗಾಢಂ ಅಭ್ಯಾಸಃ ವಾ? | ಏನಯ್ಯ! Hard Study ಯಾ ? |
| ಅದ್ಯ ಕಿಮಪಿ ನ ಪಠಿತವಾನ್ ಏವ | ಇವತ್ತು ಏನೂ ಓದಿಯೇ ಇಲ್ಲ. |
| ಮಮ ಅಕ್ಷರಾಣಿ ನ ಸುಂದರಾಣಿ | ನನ್ನ ಕೈಬರಹ ಚೆನ್ನಾಗಿಲ್ಲ. |
| ಏತಾಂ ಕಾದಂಬರೀಂ ಪಠಿತವಾನ್ ವಾ ? | ಈ ಕಾದಂಬರಿ ಓದಿದೀಯಾ ? |
| ಬಹು ಸಮ್ಯಕ್ ಅಸ್ತಿ | ತುಂಬ ಚೆನ್ನಾಗಿದೆ. |
| ಬಹು ಪೂರ್ವಂ ಏವ ಪಠಿತವಾನ್ | ತುಂಬ ಹಿಂದೇನೇ ಓದಿದೀನಿ, |
| ಶೀಘ್ರಂ ಪಠಿತ್ವಾ ದದಾಮಿ ಭೋಃ | ಬೇಗ ಓದಿ ಕೊಡ್ತೀನಿ ಕಣಯ್ಯ. |
| ಅದ್ಯ ಉತ್ಥಾನೇ ವಿಲಂಬಃ ಸಂಜಾತಃ | ಇವತ್ತು ಏಳಲಿಕ್ಕೆ ಹೊತ್ತಾಗಿಹೋಯ್ತು. |
| ಅಹಂ ಗೃಹೇ ಏವ ತ್ಯಕ್ತ್ವಾ ಆಗತವಾನ್ | ನಾನು ಮನೆಯಲ್ಲಿಯೇ ಬಿಟ್ಟು ಬಂದೆ. |
| ಅದ್ಯ ತು ವಿರಾಮಃ | ಇವತ್ತಂತೂ ರಜೆ. |
| ಭವತಃ ವರ್ಗಶಿಕ್ಷಕಃ ಕಃ ? | ನಿಮ್ಮ ವರ್ಗಾಧ್ಯಾಪಕರು ಯಾರು? |

| | |
|---|---|
| ಅದ್ಯ ಸಮವಸ್ತ್ರೇಣ ಗಂತವ್ಯಂ ವಾ ? | ಇವತ್ತು ಯೂನಿಫಾರಂ ಹಾಕ್ಕೊಂಡು ಹೋಗ್ಬೇಕಾ ? |
| ಯಾವತ್ ಶಾಲಾಂ ಗತವಾನ್ ತಾವತ್ ಘಂಟಾ ತಾಡಿತಾ | ಶಾಲೆಗೆ ಹೋಗುವಷ್ಟರಲ್ಲಿಯೇ ಘಂಟೆಯಾಯಿತು. |
| ಶ್ರೀಮನ್! ಅಂತಃ ಆಗಚ್ಛಾಮಿ ವಾ ? | ಶ್ರೀಮನ್ ! ಒಳಗೆ ಬರಲೇ ? **(May I come in, sir?)** |
| ಶ್ರೀಮನ್ ! ವಿಶೇಷಕಕ್ಷ್ಯಾ ಸ್ವೀಕ್ರಿಯತೇ ವಾ ? | ಶ್ರೀಮನ್ ! ಸ್ಪೆಷಲ್ ಕ್ಲಾಸ್ ತಗೋತೀರಾ ? |
| ಲೇಖನೀಂ ಏಕವಾರಂ ದದಾತಿ ವಾ ? | ಒಮ್ಮೆ ಪೆನ್ನು ಕೊಟ್ಟಿರ್ತೀಯಾ ? |
| ಟಿಪ್ಪಣೀಂ ಕಿಂಚಿತ್ ದದಾತಿ ವಾ ? | ನೋಟ್ಸು ಸ್ವಲ್ಪ ಕೊಟ್ಟಿರ್ತೀಯಾ ? |
| ಹ್ಯಃ ಏವ 'ಗಿರೀಶಃ' ಸ್ವೀಕೃತವಾನ್ | ನಿನ್ನೇನೇ ಗಿರೀಶ ಇಸ್ಕೊಂಡ. |
| ಅಹಂ ತದ್ದಿನೇ ನ ಆಗತವಾನ್ ಆಸಮ್ | ನಾನು ಅವತ್ತು ಬಂದಿರಲಿಲ್ಲ. |
| ಆಗಚ್ಛತು ಭೋಃ, ಕ್ರೀಡಾಮಃ | ಬಾರಯ್ಯ, ಆಡೋಣ. |
| ಪಠನೀಯಂ ಬಹು ಅಸ್ತಿ ಭೋಃ | ತುಂಬಾ ಓದೋದಿದೆ ಕಣಯ್ಯ. |
| ಕಿಂ, ಮಮ ಪಠನೀಯಂ ನಾಸ್ತಿ ವಾ ? | ಏನು, ನಂಗೆ ಓದ್ಕೋಳೋದು ಇಲ್ವಾ ? |
| ಪದವೀ ಅಶೀತಿತಮೇ ವರ್ಷೇ ಸಮಾಪಿತಾ ವಾ ? | ಡಿಗ್ರಿ ಆದುದು 80ರಲ್ಲಾ ? |
| ಸಮ್ಯಕ್ ನ ಸ್ಮರಾಮಿ ಭೋಃ | ಸರಿಯಾಗಿ ಜ್ಞಾಪಕ ಇಲ್ಲ ಕಣಯ್ಯ. |

| | |
|---|---|
| ತಿಷ್ಠತು, ಅಹಂ ಸ್ಮರಾಮಿ ತತ್ | ಇರು, ನನಗೆ ಗೊತ್ತು ಅದು. |
| ಶ್ವಃ ಆರಭ್ಯ ಸಹಾಧ್ಯಯನಂ ಕುರ್ಮಃ | ನಾಳೆಯಿಂದ ಸಹಾಧ್ಯಯನ (ಕಂಬೈಂಡ್ ಸ್ಟಡಿ) ಮಾಡೋಣ. |

## ೯. ಪರೀಕ್ಷಾ

| | |
|---|---|
| ಪರೀಕ್ಷಾ ಕದಾ ಇತಿ ಜ್ಞಾತಂ ವಾ ? | ಪರೀಕ್ಷೆ ಯಾವಾಗ ಅಂತ ಗೊತ್ತಾಯ್ತಾ ? |
| <u>ಪ್ರವೇಶಪತ್ರಂ ಸ್ವೀಕೃತಂ ವಾ ?</u> | ಹಾಲ್‌ಟಿಕೆಟ್ ತಗೊಂಡ್ರಾ ? |
| ಪರೀಕ್ಷಾ ಅಗ್ರೇ ಗತಾ | ಪರೀಕ್ಷೆ ಮುಂದೆ ಹೋಯ್ತು. |
| ವೇಲಾಪತ್ರಿಕಾ ಆಗತಾ ವಾ ? | ವೇಳಾಪತ್ರಿಕೆ ಬಂತಾ ? |
| ಪರೀಕ್ಷಾ ಕಥಂ ಆಸೀತ್ ? | ಪರೀಕ್ಷೆ ಹೇಗಿತ್ತು ? |
| ಪ್ರಶ್ನಪತ್ರಿಕಾ ಕಿಂಚಿತ್ ಕ್ಲಿಷ್ಟಾ ಆಸೀತ್ | ಪ್ರಶ್ನಪತ್ರಿಕೆ ಸ್ವಲ್ಪ ಕಠಿಣವಾಗಿತ್ತು. |
| ಅತೀವ ಸುಲಭಾ ಆಸೀತ್ | ತುಂಬ ಸುಲಭವಾಗಿತ್ತು. |
| ಹ್ಯಃ ಫಲಿತಾಂಶಃ ಪ್ರಕಟಿತಃ | ನಿನ್ನೆ ಫಲಿತಾಂಶ (Result) ಬಂತು. |
| ಅಹಂ ಪ್ರಥಮಶ್ರೇಣ್ಯಾಂ ಉತ್ತೀರ್ಣಃ | ನಾನು ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣನಾಗಿದ್ದೇನೆ (Pass). |
| ಅಂಕದ್ವಯೇನ ಪ್ರಥಮಶ್ರೇಣೀ ನ ಲಬ್ಧಾ | ಎರಡು ಅಂಕಗಳಿಂದ ಪ್ರಥಮ ಶ್ರೇಣಿ ತಪ್ಪಿಹೋಯಿತು, |
| ಪ್ರಶ್ನೇಷು ವಿಕಲ್ಪಃ ಏವ ನ ಆಸೀತ್ | Choise ಇರಲೇ ಇಲ್ಲ. |
| <u>ಫಲಿತಾಂಶಃ ಶ್ವಃ ಜ್ಞಾತಃ ಭವಿಷ್ಯತಿ</u> | ನಾಳೆ ಫಲಿತಾಂಶ(Result) ಬರುತ್ತೆ. |

| ರಮೇಶಃ ಉತ್ತೀರ್ಣಃ ವಾ ? | ರಮೇಶ ಪಾಸ್ ಆಗಿದ್ದಾನೆಯೇ ? |
|---|---|
| 'ಏಕಂ ಪತ್ರಂ ಅವಶಿಷ್ಟಂ' ಇತಿ ಉಕ್ತವಾನ್ | ಒಂದು ಪೇಪರ್ ಉಳಕೊಂಡಿದೆ ಅಂದನಪ್ಪ. |
| ಪಠಿತಂ ಕಿಮಪಿ ನ ಸ್ಮರಾಮಿ ಭೋಃ ! | ಓದಿದ್ದು ಏನೂ ಜ್ಞಾಪಕವೇ ಉಳಿಯಲ್ಲ ಕಣೋ ! |
| ದಶವಾರಂ ಪಠಿತವಾನ್, ತಥಾಪಿ ನ ಸ್ಮರಾಮಿ | ಹತ್ತುಸಾರಿ ಓದಿದೆ, ಆದರೂ ಜ್ಞಾಪಕವಿಲ್ಲ. |
| ಪ್ರಾಯಶಃ ದ್ವಿತೀಯಶ್ರೇಣೀ ಲಭ್ಯೇತ | ಬಹುತೇಕ ದ್ವಿತೀಯ ಶ್ರೇಣಿ ಬಂದೀತು. |
| ಅಸ್ಮಾಕಂ ಗಣೇ ಸರ್ವೇಽಪಿ ಉತ್ತೀರ್ಣಾಃ | ನಮ್ಮ ಬ್ಯಾಚಿನಲ್ಲಿ ಎಲ್ಲರೂ ಪಾಸು. |
| ಪ್ರತಿಶತಂ ಕತಿ ಅಂಕಾಃ ಪ್ರಾಪ್ತಾಃ ? | ಪರ್ಸೆಂಟೇಜ್ ಎಷ್ಟು ? |

## ೧೦. ಚಲಚಿತ್ರಾದಿವಿಷಯೇ

| ಮಾಸೇ ಕತಿ ಚಿತ್ರಾಣಿ ಪಶ್ಯತಿ ? | ತಿಂಗಳಿಗೆ ಎಷ್ಟು ಸಿನೆಮಾ ನೋಡ್ತೀಯಾ ? |
|---|---|
| ದ್ವಯಂ ತ್ರಯಂ ವಾ... | ಎರಡೋ ಮೂರೋ... |
| ಚಿತ್ರಮಂದಿರಂ ಪೂರ್ಣಂ ಆಸೀತ್ | ಟಾಕೀಸ್ Full ಆಗಿತ್ತು. |
| ಮಹಾನ್ ಸಮ್ಮರ್ದಃ ಆಸೀತ್ ವಾ ? | ತುಂಬಾ **Rush** ಇತ್ತಾ ? |
| ಚಿಟಿಕಾ ನ ಲಬ್ಧಾ ವಾ ? | ಟಿಕೆಟ್ ಸಿಗಲಿಲ್ವಾ ? |

| | |
|---|---|
| ಚಿತ್ರಂ ಕಥಂ ಆಸೀತ್ ? | ಸಿನೆಮಾ ಹೇಗಿತ್ತು ? |
| ಕೇವಲಂ ಡಿಶುಂಡಿಶುಂ, ತಾವದೇವ, ಅನ್ಯತ್ ಕಿಮಪಿ ನಾಸ್ತಿ | ಬರೇ ಡಿಶುಂಡಿಶುಂ ಅಷ್ಟೇ, ಬೇರೆ ಏನೂ ಇಲ್ಲ. |
| ಕರಮುಕ್ತಂ ಇತಿ ದೃಷ್ಟವಾನ್ | ತೆರಿಗೆ ವಿನಾಯ್ತಿ ಇದೆ ಅಂತ ನೋಡಿದೆ. |
| ಕಸ್ಯ ನಿರ್ದೇಶನಮ್ ? | ಯಾರ ನಿರ್ದೇಶನ ? |
| ತರ್ಹಿ ಸಮೀಚೀನಂ ಏವ ಸ್ಯಾತ್ | ಹಾಗಾದರೆ ಒಳ್ಳೆಯದಿರಬಹುದು. |
| ಸಂವಾದಃ/ಕಥಾ ಸಮೀಚೀನಂ ಅಸ್ತಿ | ಡೈಲಾಗ್ / ಕಥೆ ಚೆನ್ನಾಗಿದೆ. |
| ಏತತ್ ದ್ವಿತೀಯವಾರಂ ಪಶ್ಯನ್ ಅಸ್ಮಿ | ಇದನ್ನ ಎರಡನೇ ಸಾರಿ ನೋಡ್ತಾ ಇದೀನಿ. |
| ಏಕಂ ಅಪಿ ಚಿತ್ರಂ ಸಮ್ಯಕ್ ನಾಸ್ತಿ | ಒಂದು ಸಿನೆಮಾನೂ ಚೆನ್ನಾಗಿಲ್ಲ. |
| ಪರಹ್ಯಃ ಏವ ದೃಷ್ಟವಾನ್ ಅಹಮ್ | ಮೊನ್ನೇನೇ ನೋಡಿದೆ ನಾನು. |
| ಕೇವಲಂ ನಿಸ್ಸಾರಂ ... ಜಾಮಿತಾ ಭವತಿ | ಬರೀ ಬೋಗಸ್ ... ಬೋರ್ ಹೊಡೆಯುತ್ತೆ. |
| ತರ್ಹಿ ಕಿಮರ್ಥಂ ದ್ರಷ್ಟವ್ಯಮ್ ? | ಹಾಗಾದರೆ ಮತ್ಯಾಕಯ್ಯಾ ನೋಡಬೇಕು ? |
| <u>ಮಯಾ ಅಪಿ ಏಕವಾರಂ ದ್ರಷ್ಟವ್ಯಮ್</u> | ನಾನೂ ಒಂದು ಸಾರಿ ನೋಡಬೇಕು. |
| ಸರ್ವೇ ಮಿಲಿತ್ವಾ ಗತವಂತಃ ವಾ ? | ಎಲ್ಲಾ ಒಟ್ಟಿಗೆ ಹೋಗಿದ್ದಿರಾ ? |
| ಕೇವಲಂ ಧನಂ ವ್ಯರ್ಥಂ | ಬರೀ ದುಡ್ಡು ದಂಡ. |

| | |
|---|---|
| ಭವತಃ ವೇತನಶ್ರೇಣೀ ಕಾ ? | ನಿಮ್ಮ ವೇತನಶ್ರೇಣಿ(Scale) ಎಷ್ಟು? |
| ಇದಾನೀಂ ಸರ್ವತ್ರ ಸಮಾನಾ ಕಿಲ ? | ಈಗ ಎಲ್ಲಾ ಕಡೆಯೂ ಒಂದೇ ರೀತಿ ಅಲ್ವಾ ? |
| ಪ್ರಾಚಾರ್ಯಸ್ಯ ಆದೇಶಂ ದೃಷ್ಟವಾನ್ ವಾ ? | ಪ್ರಿನ್ಸಿಪಾಲರ ಮೆಮೋ ನೋಡಿದಿರಾ ? |
| ತತ್ ತು ಸಾಮಾನ್ಯಮ್ | ಅದು ಬಿಡಿ, ಮಾಮೂಲಿ. |
| ಅಧಿವೇತನಂ ಲಬ್ಧಂ ವಾ ? | ಇನ್‌ಕ್ರಿಮೆಂಟ್ ಸಿಕ್ಕಿತಾ ? |
| ಲಿಪಿಕಾರಂ ದೃಷ್ಟವಾನ್ ವಾ ? | ಕ್ಲಾರ್ಕ್‌ರನ್ನು ನೋಡಿದಿರಾ ? |
| ಏವಂ ಚೇತ್ ಕಥಂ ಜೀವಾಮಃ ? | ಹೀಗಾದರೆ ಹೇಗೆ ಬದುಕೋದು ? |
| ಮಹಾನ್ ಕೋಲಾಹಲಃ ಇತಿ ಶ್ರುತವಾನ್ | ತುಂಬಾ ಗದ್ದಲ ಅಂತ ಕೇಳಿದೆ. |
| ಪತ್ರಿಕಾ ಪಠಿತಾ ವಾ ? | ಪತ್ರಿಕೆಯನ್ನು ಓದಿದಿರಾ ? |
| ವೇತನಂ ವರ್ಧಿತಮ್ | ಸಂಬಳ ಹೆಚ್ಚಿದೆ. |
| ಕದಾ ಆರಭ್ಯ ಅನ್ವಯಃ ? | ಯಾವಾಗಲಿಂದ ಅನ್ವಯವಾಗುತ್ತಂತೆ ? |
| ಇದಾನೀಂ ಕಕ್ಷ್ಯಾ ಅಸ್ತಿ ವಾ ? | ಈಗ ತರಗತಿ ಇದೆಯಾ ? |
| ಅದ್ಯ ಕಕ್ಷ್ಯಾಂ ನ ಸ್ವೀಕರೋಮಿ, ಇತಿ ಸೂಚಯತು | ಇವತ್ತು ತರಗತಿ ತಗೋಳೊಲ್ಲ ಅಂತ ಹೇಳು. |
| ಪ್ರಾಚಾರ್ಯಃ ಆಗತಃ ವಾ ? | ಪ್ರಿನ್ಸಿಪಾಲರು ಬಂದರಾ ? |
| ಅಸ್ಮಿನ್ ಮಾಸೇ ಕತಿ ವಿರಾಮಾಃ ? | ಈ ತಿಂಗಳು ಎಷ್ಟು ರಜೆ ? |
| ಪರಶ್ವಃ ವಿರಾಮಃ ಅಸ್ತಿ ವಾ ? | ನಾಡಿದ್ದು ರಜೆ ಇದೆಯಂತಾ ? |
| ಪ್ರಶ್ನಪತ್ರಿಕಾ ಸಜ್ಜೀಕೃತಾ ವಾ ? | ಪ್ರಶ್ನಪತ್ರಿಕೆ ಸಿದ್ಧವಾಯಿತಾ ? |

